ವಿಶ್ವ ಕೊಂಕಣಿ ಕೇಂದ್ರ ಗ್ರಂಥಾಲಯಕ್ಕೆ

26.11.2021

ಖಾರ್ವಿ ಚೇತನ

# ಕೆ. ವಾಸುದೇವ ನಾಯ್ಕ್

ಸಂಪಾದಕ : ವಿಶ್ವ ಕುಂದಾಪುರ

ಜನಪ್ರತಿನಿಧಿ ಪ್ರಕಾಶನ



Editor : Vishwa Kundapura

Publisher : JANAPRATHINIDHI PRAKASHANA
College Road, Kundapura 576 201



Cell : **9480106014**

ಪ್ರಥಮ ಮುದ್ರಣ : 2019

ಪುಟಗಳು : IV + 64

ಪ್ರತಿಗಳು : 500

ಬೆಲೆ : ರೂ. 50/-

First Print : 2019

Copies : 500

Price : Rs. 50/-

ಪ್ರಕಾಶಕರು : ಜನಪ್ರತಿನಿಧಿ ಪ್ರಕಾಶನ
ಕಾಲೇಜ್ ರಸ್ತೆ
ಕುಂದಾಪುರ 576 201

# ಪ್ರಕಾಶಕರ ಮಾತು

ಜನಪ್ರತಿನಿಧಿ ಪತ್ರಿಕೆಯ ಆರಂಭದಲ್ಲಿ ಪರಿಚಯರಾದವರು ಪತ್ರಕರ್ತ ವಿಶ್ವ ಕುಂದಾಪುರ ರವರು. ಪತ್ರಕರ್ತರಾಗಿ ನಮ್ಮ ಪತ್ರಿಕೆಗೂ ಲೇಖನ ನೀಡಿ ಮಾರ್ಗದರ್ಶನ ಮಾಡಿ ಪ್ರೋತ್ಸಾಹಿಸುತ್ತಾ ಬಂದವರು. ಇದೇ ಸಂದರ್ಭದಲ್ಲಿ ಅವರ ತಂದೆ ವಾಸುದೇವ ನಾಯ್ಕ್‌ರವರ ಪರಿಚಯ ಆಗುತ್ತದೆ. ಅಪರೂಪಕ್ಕೊಮ್ಮೆ ಕಛೇರಿಗೆ ಬಂದು ಲೇಖನ ನೀಡಿ ಹೋಗುತ್ತಿದ್ದರು. ಸರಳ ಸಜ್ಜನಿಕೆಯ ವ್ಯಕ್ತಿಯಾಗಿ ಸಮಾಜದಲ್ಲಿ ಗುರುತಿಸಿಕೊಂಡವರು. ಈ ಸಂದರ್ಭದಲ್ಲಿ ವಾಸುದೇವ ನಾಯ್ಕ್ ಮತ್ತು ಅವರ ಕುರಿತಾದ ಲೇಖನಗಳ ಗುಚ್ಛವನ್ನು ಪ್ರಕಟಿಸಲು ನನಗೆ ಅವಕಾಶ ದೊರೆತಿದೆ.

ವಾಸುದೇವ ನಾಯ್ಕ್ ರವರು ಒಬ್ಬ ಸಾಮಾಜಿಕ ಚಿಂತಕ. ಸಮಾಜದ ಕೆಳವರ್ಗದ ಜನರು ಶಿಕ್ಷಣದಿಂದ ವಂಚಿತರಾಗಬಾರದು ಎಂಬ ಕನಸನ್ನು ಹೊತ್ತವರು. ಆ ನಿಟ್ಟಿನಲ್ಲಿ ಜಾಗೃತಿ ಮೂಡಿಸುತ್ತಾ ಬಂದವರು. ಮುಖ್ಯವಾಗಿ ತಾನು ಹುಟ್ಟಿದ ಕೊಂಕಣ ಖಾರ್ವಿ ಸಮಾಜದ ಜನ ವಿದ್ಯಾವಂತರಾಗಬೇಕೆಂದು ಮಹದಾಸೆ ಹೊತ್ತವರು. ಕರಾವಳಿ ಜಿಲ್ಲೆಗಳ ಕೊಂಕಣಿ ಮಾತನಾಡುವ ಖಾರ್ವಿ ಸಮಾಜದ ಜನಪದ ಹಾಡುಗಳ ಬಗ್ಗೆ ವಿಶೇಷ ಆಸಕ್ತಿ ತೋರಿ ಅಧ್ಯಯನ ಮಾಡಿದವರು.

ಈ ಪುಸ್ತಕದಲ್ಲಿ ವಾಸುದೇವ ನಾಯ್ಕ್‌ರ ಬಗ್ಗೆ ಈ ನಾಡಿನ ಅನೇಕ ಬರಹಗಾರರ ಚಿಂತಕರ ಲೇಖನಗಳಿವೆ.

ಪ್ರೊ ಎ.ವಿ. ನಾವಡರಂತೂ ವಾಸುದೇವ ನಾಯ್ಕ್‌ರವರನ್ನು 'ಖಾರ್ವಿಗಳ ನಡುವಿನ ಸಂತ' ಎಂದೇ ಕರೆದರು. ಇದರ ಬಗ್ಗೆ ಈ ಪುಸ್ತಕದಲ್ಲಿ ಲೇಖನವಿದೆ. ಖ್ಯಾತ ಸಾಹಿತಿ ನಾ'ಡಿಸೋಜರವರು 'ಕಡಲ ಕುವರ' ಎಂದು ಸಂಬೋಧಿಸಿದರು. ಹೀಗೆ ಅನೇಕರು ಇವರ ಕಾರ್ಯಗಳನ್ನು ಶ್ಲಾಘಿಸಿ ಲೇಖನ ಬರೆದಿದ್ದಾರೆ.

ಈ ಪುಸ್ತಕ ಚಿಕ್ಕದಾದರೂ ಶ್ರಮದ ಮೂಲಕ ಬದುಕು ಕಟ್ಟಿಕೊಂಡ ಸಾಮಾಜಿಕ ನಾಯಕನೆಂದೆ ಕರೆಯಬಹುದಾದ ವಾಸುದೇವ ನಾಯ್ಕ್‌ರ ವ್ಯಕ್ತಿತ್ವದ ಚುಟುಕು ಮಾಹಿತಿ ಯಷ್ಟೇ ಈ ಪುಸ್ತಕದಲ್ಲಿ ಇದೆ.

ಈ ಪುಸ್ತಕವನ್ನು ನಾನೇ ಪ್ರಕಟಿಸಬೇಕೆನ್ನುವುದು ವಿಶ್ವ ಕುಂದಾಪುರ ಅವರ ಅಪೇಕ್ಷೆ. ಈ ಕಾರ್ಯವನ್ನು ನಾನು ಸಂತೋಷದಿಂದ ಒಪ್ಪಿಕೊಂಡೆ. ಈ ಪುಸ್ತಕ ಹೊರತರಲು ಸಹಕರಿಸಿದ ಎಲ್ಲರಿಗೂ ಈ ಸಂದರ್ಭದಲ್ಲಿ ಕೃತಜ್ಞತೆಗಳು.

**ಸುಬ್ರಹ್ಮಣ್ಯ ಪಡುಕೋಣೆ**
ಪ್ರಕಾಶಕ

## ಅರ್ಪಣೆ

ಶ್ರಮಜೀವಿ

ಮೀನುಗಾರ

ಬಂಧುಗಳಿಗೆ

# ಪರಿವಿಡಿ





ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿ

## ಗವ್ರವ್ ಪ್ರಶಸ್ತಿ-2008

— ಲೋಕ್‌ವೇದ್ ಪ್ರಶಸ್ತಿ —



### ಮಾನೆಸ್ತ್ ವಾಸುದೇವ ನಾಯ್ಕ್

ತುಮಿ ಕೊಂಕ್ಣಿ ಲೋಕ್‌ವೇದ್ ಶೆತಾಂತ್ ದಿಲ್ಲ್ಯಾ ಅಪಾರ್ ಸೆವೆ ಖಾತಿರ್
ತುಮ್ಕಾಂ ಹೊ ಮಾನ್ ಫಾವೊ ಜಾತಾ.
ಪರ್ಬಿಂ ತುಮ್ಕಾಂ!

ಎನ್. ಹರಿಕುಮಾರ್
ರಿಜಿಸ್ಟ್ರಾರ್

ಕುಂದಾಪುರ ನಾರಾಯಣ ಖಾರ್ವಿ
ಅಧ್ಯಕ್ಷ್


ಕರ್ನಾಟಕ್ ಕೊಂಕಣಿ ಸಾಹಿತ್ ಅಕಾಡೆಮಿ
ಬಾಲ್ಮ್ಯಾಗ್, ಮಂಗ್ಳುರ್ - 575 003. ✆ : 2453167.
E-mail : konkanisahityaacademy@yahoo.co.in


**ಕೊಂಕಣಿ ಜಾನಪದ ಕ್ಷೇತ್ರಕ್ಕೆ ಸಲ್ಲಿಸಿದ ಅಪಾರ ಸೇವೆಯನ್ನು ಗುರುತಿಸಿ ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿ ಕೆ. ವಾಸುದೇವ ನಾಯ್ಕ್ ಇವರಿಗೆ 2008ರಲ್ಲಿ'ಲೋಕವೇದ್' ಪ್ರಶಸ್ತಿ ನೀಡಿ ಗೌರವಿಸಿತು.**

## ಒಲವಿನ ತೊದಲು ಮಾತು.....

* **ನಿಜವಾದ ವಿದ್ಯೆಯೆಂಬುದು ಸಮೃದ್ಧ ಕಾಲದಲ್ಲಿ ಆಭರಣವಿದ್ದಂತೆ. ದುರ್ಭಿಕ್ಷ ಕಾಲದಲ್ಲಿ ಶ್ರೀರಕ್ಷೆಯಂತೆ – ಅರಿಸ್ಟಾಟಲ್**
* **ಸಮಾಜ ನಿನಗೆ ಏನು ಕೊಟ್ಟಿತು ಎನ್ನುವುದಕ್ಕಿಂತ ಸಮಾಜಕ್ಕೆ ನೀನೇನು ಕೊಟ್ಟೆ ಎನ್ನುವುದು ಮುಖ್ಯ – ಅನಾಮಿಕ**

ಸ್ವತಃ ನಮ್ಮ ಅಥವಾ ನಮ್ಮವರ ಬಗ್ಗೆ ಬರೆಯುವುದು ಒಂದು ರೀತಿಯಲ್ಲಿ ಸಂಕೋಚ ತರುವ ಸಂಗತಿ. ಆದರೂ ತಂದೆಯವರ ಬಗ್ಗೆ ಬರೆಯುವುದು ಅನಿವಾರ್ಯ ಎಂಬ ಪರಿಸ್ಥಿತಿ ನಿರ್ಮಾಣವಾಗಿದ್ದರಿಂದ ಬರೆಯಲೇಬೇಕಾಗಿದೆ. ನಮಗೆ ಜನ್ಮ ಕೊಟ್ಟ, ಮೇಲಾಗಿ ಶಿಕ್ಷಣದ ಬೆಳಕನ್ನು ಕೊಟ್ಟ ಅವರ ಋಣವನ್ನು ತೀರಿಸಲಿಕ್ಕಾಗಿಯಾದರೂ ಅವರ ಜಾನಪದ ಸೊಗಡಿನ ಕೊಂಕಣಿ ಕವನಗಳನ್ನು ಹಾಗೂ ಬೆರಳೆಣಿಕೆಯ ಕನ್ನಡ ಕವನಗಳನ್ನು ದಾಖಲಿಸಬೇಕು ಎಂಬ ಹಂಬಲ ಅನೇಕ ವರ್ಷಗಳಿಂದ ನನ್ನನ್ನು ಕಾಡುತ್ತಿತ್ತು. ಇಂಥದ್ದೊಂದು ಕೃತಿಗೆ ಅವರು ಅತ್ಯಂತ ಅರ್ಹರು. ಈ ಮೂಲಕವಾದರೂ ಅವರ ನೆನಪನ್ನು ಅಕ್ಷರ ರೂಪದಲ್ಲಿ ದಾಖಲಿಸುವುದು ಅಗತ್ಯ ಎಂದು ಭಾವಿಸಿದೆ.

ಬಲಗೈಯಲ್ಲಿ ಕೊಟ್ಟಿದ್ದು ಎಡಗೈಗೆ ಗೊತ್ತಾಗಬಾರದು ಎನ್ನುವ ರೀತಿಯಲ್ಲಿ ಕೆಲಸ ಮಾಡಿ ಸಮಾಜ ಸೇವೆ ಅಥವಾ ಸಾಮಾಜಿಕ ಕಾರ್ಯಕ್ಕೆ ನಿಜವಾದ ಮೌಲ್ಯ ತರುವಂತೆ ಬಾಳಿ ಬದುಕಿದವರು ನನ್ನ ತಂದೆ ಕೆ. ವಾಸುದೇವ ನಾಯ್ಕ್ ಇವರು (11.02.1929–15.06.2009) ಆರ್ಥಿಕವಾಗಿ ಮಾತ್ರವಲ್ಲ ತಮ್ಮ ಜೀವನದ ಅಮೂಲ್ಯ ಸಮಯದ ಬಹುಭಾಗವನ್ನು ಯಾವುದೇ ಫಲಾಪೇಕ್ಷೆ ಇಲ್ಲದೆ ವ್ಯಯಿಸಿ ಸಮಾಜದ ಉನ್ನತಿಗಾಗಿ ಶ್ರಮಿಸಿದವರು ನನ್ನ ತಂದೆ. ಪ್ರಚಾರವೆಂಬ ಅನಿಷ್ಟದಿಂದ ಬಹು-ಬಹು ದೂರವೇ ಉಳಿದಿದ್ದವರು ನನ್ನ ತಂದೆ.

ಹಾಂ, ಫಲಾಪೇಕ್ಷೆ ಇಲ್ಲದೆ ಎಂದು ಹೇಳಿದೆನಲ್ಲವೇ?. ಅದು ಒಂದು ರೀತಿಯಲ್ಲಿ ಸುಳ್ಳೆನಿಸುತ್ತದೆ!. ಹೌದಾ?. ಹೌದು, ಅವರು ಫಲವನ್ನು ಅಪೇಕ್ಷಿಸಿದ್ದರು!. ಆದರೆ ಅದು ತಮ್ಮ ಸ್ವಂತಕ್ಕಾಗಿಯೂ ಅಲ್ಲ, ತಮ್ಮ ಕುಟುಂಬ ಸದಸ್ಯರಿಗಾಗಿಯೂ ಅಲ್ಲ. ತಾನು ಸೇರಿದ ತೀರಾ ಬಸವಳಿದ, ಸಾಮಾಜಿಕವಾಗಿಯೂ ಆರ್ಥಿಕವಾಗಿಯೂ ಮಾತ್ರವಲ್ಲದೆ ರಾಜಕೀಯವಾಗಿಯೂ ಹಿಂದುಳಿದ ಶ್ರಮಜೀವಿ ಸಮಾಜವಾದ, ಮೀನುಗಾರಿಕೆ ಕುಲಕಸಬಾಗಿ ಹೊಂದಿದ ಖಾರ್ವಿ ಜನರ ಪ್ರಗತಿಯೆಂಬ ಸಿಹಿಫಲವನ್ನು ಅವರು

ಬಯಸಿದ್ದರು. ಅವರು ಅಪೇಕ್ಷಿಸಿದ್ದು ಅದೊಂದೇ ಫಲವನ್ನು. ತಮ್ಮ ಏಳೂ ಮಕ್ಕಳಿಗೆ ವಿದ್ಯೆ ಎಂಬ ಕದಿಯಲಾಗದ ಗಂಟು ಕೊಡಿಸಿದ್ದೇ ಅವರ ಹಾಗೂ ತಾಯಿ ಗಂಗಾಬಾಯಿಯ ದೊಡ್ಡ ಕೊಡುಗೆ.

ಸಮಾಜದ ಕಟ್ಟಕಡೆಯ ಮನುಷ್ಯರಿಗೂ ಅಭಿವೃದ್ಧಿಯ ಫಲ ಸಿಗಬೇಕೆಂಬ ಸಮಾಜವಾದಿ ಪರಿಕಲ್ಪನೆಗೆ ಬದ್ಧರಾಗಿ ಅದನ್ನು ಸಾಕಾರಗೊಳಿಸಲು ತಮ್ಮದೇ ಆದ ಮಾರ್ಗದಲ್ಲಿ ನಡೆದು ತೋರಿದವರು ನನ್ನ ತಂದೆ.

ಈ ಪ್ರಗತಿ ಸಾಧನೆಗಾಗಿ ಅವರು ಆಯ್ದು ಕೊಂಡಿದ್ದು ಶಿಕ್ಷಣ ಮತ್ತು ಸಂಘಟನೆ ಎಂಬ ಮಹಾ ಅಸ್ತ್ರವನ್ನು. ಶಿಕ್ಷಣವು ಮಾನವ ವಿಮೋಚನೆಯ ಒಂದು ಮಹಾನ್ ಸಾಧನ ಎಂದು ಅರಿಸ್ಟಾಟಲ್, ಬುದ್ಧ, ಬಸವ, ಬಿ.ಆರ್. ಅಂಬೇಡ್ಕರ್, ಮಹಾತ್ಮಾ ಗಾಂಧಿ, ಜ್ಯೋತಿಬಾ ಫುಲೆ, ಸಾವಿತ್ರಿಬಾಯಿ ಫುಲೆ, ನೆಲ್ಸನ್ ಮಂಡೇಲಾ, ಪಂಪ, ಕುವೆಂಪು... ಹೀಗೆ ತತ್ವಜ್ಞಾನಿಗಳು, ರಾಜಕೀಯ ಚಿಂತಕರು, ಸಮಾಜ ಸುಧಾರಕರು, ಹೋರಾಟಗಾರರು ವಿವಿಧ ರೀತಿಯಲ್ಲಿ ವಿಶ್ಲೇಷಿಸಿದ್ದಾರೆ. ಆ ಬೆಳಕಿನ ದೊಂದಿ ಹಿಡಿದು ತಮ್ಮ ಸಮಾಜದಲ್ಲಿ ಶಿಕ್ಷಣದ ಬೆಳಕು ಪಸರಿಸಲು ನನ್ನ ತಂದೆ ಅನವರತ ದುಡಿದರು.

ತಂದೆಯವರು ತುಂಬಾ ಕಲಿತವರೇನೂ ಅಲ್ಲ. ಆ ಕಾಲದ ಎಸ್‌ಎಸ್‌ಎಲ್‌ಸಿಯನ್ನು ಮುಗಿಸಿದವರು. ಆದರೆ ಅವರ ಸಾಮಾಜಿಕ ದೃಷ್ಟಿಯ ಒಳಗಣ್ಣು ಅತ್ಯಂತ ಪ್ರಖರವಾದುದಾಗಿತ್ತು. ಅವರ ಇಂಗ್ಲಿಷ್ ಭಾಷಾ ಪ್ರೌಢಿಮೆ, ಜ್ಞಾನ ಭಂಡಾರ ಯಾವುದೇ ಪದವೀಧರರು, ಸ್ನಾತಕೋತ್ತರ ಪದವೀಧರರನ್ನು ಮೀರಿಸಿದ್ದಾಗಿತ್ತು. ತಮ್ಮ ವೃತ್ತಿ ಜೀವನವನ್ನು ಶಿಕ್ಷಕನಾಗಿ ಆರಂಭಿಸಿದರೂ ಅವರು ಹೆಚ್ಚಾಗಿ ಕಾರ್ಯನಿರ್ವಹಿಸಿದ್ದು ನ್ಯಾಯಾಂಗ ಇಲಾಖೆಯಲ್ಲಿ. ಸ್ವಲ್ಪ ಸಮಯ ಮಾರಾಟ ತೆರಿಗೆ ಇಲಾಖೆಯಲ್ಲಿ ಕೆಲಸ. ಶಿಕ್ಷಕ ವೃತ್ತಿಯನ್ನು ಮುಂದುವರಿಸದಿದ್ದರೇನಂತೆ, ಅವರು ಜೀವಮಾನ ಪರ್ಯಂತ ಸಾಮಾಜಿಕ ಶಿಕ್ಷಕನಾಗಿ ಕಾಯಕ ನಡೆಸಿದರು. ನರಸಿಂಹ ಆರ್ಕಾಟಿ ಮೊದಲಾದ ಸಮಾನ ಮನಸ್ಕರ ಜೊತೆ ಸೇರಿ ಹಲವು ಸಂಘ-ಸಂಸ್ಥೆಗಳನ್ನು ಸ್ಥಾಪಿಸಿ ತಮ್ಮ ಸಮಾಜದ ಜನರನ್ನು ಜ್ಞಾನದ ಬಲೆಯಲ್ಲಿ ಸೆರೆ ಹಿಡಿಯುವ ಕೆಲಸವನ್ನು ಮಾಡಿದರು. ಒಬ್ಬ ಅಪ್ಪಟ ದೈವಭಕ್ತನಾಗಿದ್ದೂ ಮೌಢ್ಯದ ಜಾಡ್ಯದಿಂದ ಜನರನ್ನು ಹೊರತರಲು ಹೆಣಗಿದರು. ತಮ್ಮ ಶ್ರಮಜೀವಿ ಜನಾಂಗದ ಅಮೂಲ್ಯ ಜಾನಪದ ಸಂಪತ್ತನ್ನು ರಕ್ಷಿಸಲು ಹಾಗೂ ಪ್ರಸಾರ ಮಾಡಲು ಮಾರ್ಗದರ್ಶನ ನೀಡಿದರು.

ಮೀನುಗಾರಿಕೆ ಪ್ರಧಾನ ವೃತ್ತಿಯಾಗಿರುವ ದಕ್ಷಿಣ ಕನ್ನಡ, ಉಡುಪಿ ಮತ್ತು ಉತ್ತರ ಕನ್ನಡ ಜಿಲ್ಲೆಗಳ ಮಂಗಳೂರಿನಿಂದ ಕಾರವಾರವರೆಗಿನ ಕರಾವಳಿಯುದ್ದಕ್ಕೂ

ವಾಸಿಸುತ್ತಿರುವ ಕೊಂಕಣಿಯನ್ನು ಮಾತೃಭಾಷೆಯನ್ನಾಗಿ ಹೊಂದಿರುವ ಖಾರ್ವಿ ಜನಾಂಗ ಜನಪದ ಸಾಹಿತ್ಯ, ನೃತ್ಯಗಳ ಗಣಿಯೇ ಆಗಿದೆ. ಆಧುನಿಕ ಸಂಸ್ಕೃತಿಯ ದಾಂಗುಡಿಯಲ್ಲಿ ಇವೆಲ್ಲ ಚೆಲ್ಲಾಪಿಲ್ಲಿಯಾಗಿ ನಾಪತ್ತೆಯಾಗುವ ಅಪಾಯ ಅರಿತ ವಾಸುದೇವ ನಾಯ್ಕ್ ಇವರು ಈ ಅಮೂಲ್ಯ ಹಾಡು-ನೃತ್ಯಗಳನ್ನು ಉಳಿಸಿ, ಪ್ರಚುರಪಡಿಸುವಲ್ಲಿ ಅನವರತ ಶ್ರಮವಹಿಸಿದ್ದರು. ಅವರ ಪ್ರಯತ್ನಗಳ ಭಾಗವಾಗಿ ಖಾರ್ವಿ ಜನರ ಅನೇಕ ಜನಪದ ಹಾಡುಗಳು ಮತ್ತು ನೃತ್ಯಗಳ ಸಂರಕ್ಷಣೆಯಾಗಿದೆ. ರಾಜ್ಯ ರಾಜಧಾನಿ ಬೆಂಗಳೂರಿನಲ್ಲೂ ದೇಶದ ರಾಜಧಾನಿ ನವದೆಹಲಿಯಲ್ಲೂ ಈ ಅಮೂಲ್ಯ ಪ್ರದರ್ಶಕ ಕಲೆಗಳನ್ನು ಸಾದರಪಡಿಸಲಾಗಿದೆ. ದೂರದರ್ಶನದ 'ಚಂದನ' ವಾಹಿನಿಯಲ್ಲೂ ಪ್ರಸಾರವಾಗಿವೆ. ಮೂಲ ಜನಪದ ಕೃತಿಗಳ ಸಂಗ್ರಹ ಒಂದೆಡೆಯಾದರೆ ನನ್ನ ತಂದೆಯವರು ಸ್ವತಃ ಅನೇಕ ಜನಪದ ಸೊಗಡಿನ ಕೊಂಕಣಿ ಹಾಡುಗಳನ್ನು ಬರೆದು ಮೀನುಗಾರರ ಶ್ರಮಜೀವನಕ್ಕೆ ದನಿಯಾಗಿದ್ದಾರೆ. ಭಕ್ತಿಗೀತೆಗಳನ್ನು ಮಾತ್ರವಲ್ಲದೆ ಜಾನಪದ ಹಾಡುಗಳನ್ನೂ ಸುಶ್ರಾವ್ಯವಾಗಿ ಹಾಡುತ್ತಿದ್ದುದು ನನ್ನ ತಂದೆಯವರ ವಿಶೇಷ ಪ್ರತಿಭೆಯಾಗಿತ್ತು.

ಸಮಾನ ಮನಸ್ಕರೊಂದಿಗೆ ಸೇರಿ ತಮ್ಮ 40ನೇ ವಯಸ್ಸಿನಲ್ಲಿ, ಅಂದರೆ 1969ರಲ್ಲಿ ಸ್ಥಾಪಿಸಿದ 'ವಿದ್ಯಾರಂಗ ಮಿತ್ರಮಂಡಳಿ' ಖಾರ್ವಿ ಸಮಾಜದಲ್ಲಿ ಸಾಕ್ಷರತೆ-ಶೈಕ್ಷಣಿಕ ಕ್ರಾಂತಿಗೆ ನಾಂದಿ ಹಾಡಿತು. ತಮ್ಮ ಸಮಾಜದ ಯುವಜನರು ಶಿಕ್ಷಣ ಪಡೆದು ಉದ್ಯೋಗಸ್ಥರಾಗಿ ಸ್ವಾಭಿಮಾನದ ಜೀವನ ಸಾಗಿಸಬೇಕೆಂಬುದು ಅವರ ಮಹದಾಸೆಯಾಗಿತ್ತು. ಅದಕ್ಕಾಗಿ ಬೇಕಾದ ಎಲ್ಲಾ ಪ್ರೋತ್ಸಾಹ-ಮಾರ್ಗದರ್ಶನ ನೀಡುತ್ತಿದ್ದರು. ಇದಕ್ಕಾಗಿ ಧರ್ಮಸ್ಥಳ ಕ್ಷೇತ್ರವೂ ಸೇರಿದಂತೆ ವಿವಿಧ ಸಂಘ-ಸಂಸ್ಥೆಗಳ, ವಿವಿಧ ಜನಾಂಗಗಳ ಸಹಕಾರವನ್ನೂ ಪಡೆದರು. ಅಖಿಲ ಭಾರತ ಕೊಂಕಣ ಖಾರ್ವಿ ಮಹಾಜನ ಸಂಘ ಸ್ಥಾಪನೆಯಲ್ಲಿ ಪಾತ್ರ ವಹಿಸಿದರು. ರಾಜಕೀಯ ಶಕ್ತಿಯೂ ತಮ್ಮ ಜನಾಂಗಕ್ಕೆ ಬೇಕೆಂಬ ಪ್ರೇರಣೆಯಿಂದ ಒಮ್ಮೆ 'ಮೀನು' ಚಿಹ್ನೆ ಹೊಂದಿ ವಿಧಾನ ಸಭೆ ಚುನಾವಣೆಗೆ ಸ್ಪರ್ಧಿಸಿದ್ದೂ ಇದೆ. ತಮ್ಮ ಜನರ ಬೆಂಬಲ ಸಿಗಲಿಲ್ಲ ಎನ್ನುವ ಕಾರಣಕ್ಕೆ, ಅಥವಾ ಬೇರೆ ಸಂದರ್ಭಗಳಲ್ಲೂ ನೋವುಂಟಾಗುವ ಪ್ರಕರಣಗಳು ನಡೆದರೂ ಅವರನ್ನು ಯಾವ ಕಾರಣಕ್ಕೂ ನಿರ್ಲಕ್ಷಿಸದೆ ತಮ್ಮ ಸಮಾಜಮುಖಿ ಕೆಲಸವನ್ನು ಮುಂದುವರಿಸಿದರು.

ಮಹಾಸ್ವಾಭಿಮಾನಿಯಾಗಿದ್ದ ಅವರೊಬ್ಬ ಅಧ್ಯಯನಶೀಲ ಸಾಮಾಜಿಕ ಕಾರ್ಯಕರ್ತರಾಗಿದ್ದರು. ತಮ್ಮ ಸಮಾಜದ ಮೂಲ, ಅದರ ಹಿಂದುಳಿದಿರುವಿಕೆ ಮೊದಲಾದವುಗಳನ್ನು ಸಾಬೀತುಪಡಿಸಲು ಆಳವಾದ ಅಧ್ಯಯನ ಮಾಡಿ ಅಧಿಕಾರಸ್ಥರ ಮುಂದೆ ಮಂಡಿಸಲು ರಂಗ ಸಜ್ಜುಗೊಳಿಸುತ್ತಿದ್ದರು. ಖಾರ್ವಿ ಜನಾಂಗ ಕುರಿತಾದ ಸ್ಟರಕ್ ವರದಿಯನ್ನು ಜಾಲಾಡಿ ಹುಡುಕಿದ್ದು ಅವರ ಈ

ಗುಣಕ್ಕೆ ದೊಡ್ಡ ಸಾಕ್ಷಿ. ಸಂಘ-ಸಂಸ್ಥೆಗಳ ಪರವಾಗಿ ಅವರು ಬರೆದ ಒಂದೊಂದು ಮನವಿ ಪತ್ರವೂ ಒಂದೊಂದು ದಾಖಲೆಯಾಗಬಲ್ಲವು. ಅವುಗಳ ಒಕ್ಕಣೆ ಹಾಗೂ ಅಧ್ಯಯನಪೂರ್ಣ ಅಂಶಗಳು ಹಾಗಿರುತ್ತಿದ್ದವು.

ಭಾರತದ ಸ್ವಾತಂತ್ರ್ಯ ಸಂಗ್ರಾಮದ ಕಾವು ಏರಿದ್ದಾಗ 1945ರ ಅಸಹಕಾರ ಆಂದೋಲನದ ಸಂದರ್ಭದಲ್ಲಿ ಚಳವಳಿಯಲ್ಲಿ ಪಾಲ್ಗೊಂಡಿದ್ದಕ್ಕಾಗಿ ಸೈಂಟ್ ಮೇರೀಸ್ ಶಾಲೆಯ ಎಂಟನೇ ತರಗತಿ ವಿದ್ಯಾರ್ಥಿ ಕೆ.ವಿ. ನಾಯ್ಕ್‌ರನ್ನು ಅನುತ್ತೀರ್ಣಗೊಳಿಸಲಾಯಿತು. ಮುಂದೆ ಅವರು ಗಂಗೊಳ್ಳಿಯ ಎಸ್‌ವಿಎಸ್ ಹೈಸ್ಕೂಲ್‌ನಲ್ಲಿ ಎಂಟನೇ ತರಗತಿ ಪಾಸ್ ಮಾಡಿ ಆನಂತರ ಕುಂದಾಪುರದ ಬೋರ್ಡ್ ಹೈಸ್ಕೂಲ್‌ನಲ್ಲಿ (ಈಗ ಸರಕಾರಿ ಪದವಿ ಪೂರ್ವ ಕಾಲೇಜ್) ಶಿಕ್ಷಣ ಮುಂದುವರಿಸಿ ಮದ್ರಾಸ್ ಪ್ರಾಂತ್ಯದ ಎಸ್‌ಎಸ್‌ಎಲ್‌ಸಿಯಲ್ಲಿ ತೇರ್ಗಡೆಯಾದರು.

'ಬೆಳೆಯ ಸಿರಿ ಮೊಳಕೆಯಲ್ಲಿ' ಎನ್ನುವಂತೆ ಮಿಶನರಿ ಗುಂಪಿನ ಕೆರೆಟ್ ಕುಟುಂಬ ನಡೆಸುತ್ತಿದ್ದ ವಿಕ್ಟೋರಿಯಾ ಎಲಿಮೆಂಟರಿ ಶಾಲೆಲ್ಲಿ ಪ್ರಾಥಮಿಕ ಶಿಕ್ಷಣ ಪಡೆಯುತ್ತಿದ್ದಾಗಲೇ ಇವರು ಶಾಲಾ ಮುಖಂಡನಾಗಿ ಮನೆಮನೆಗೆ ತೆರಳಿ ಖಾರ್ವಿ ಸಮಾಜದ ಮಕ್ಕಳನ್ನು ಶಾಲೆಗೆ ಕರೆತರುತ್ತಿದ್ದರು ಎಂಬುದು ಗಮನಾರ್ಹ ಸಂಗತಿ. ಶಿಕ್ಷಿತರಲ್ಲದಿದ್ದರೂ ಶಿಕ್ಷಣದ ಮಹತ್ವದ ಅರಿವಿದ್ದ ಅಜ್ಜ ಕೆ. ಮಂಜುನಾಥ ನಾಯ್ಕರ ಪ್ರೇರಣೆ-ಪ್ರಭಾವ ನನ್ನ ತಂದೆಯವರ ಮೇಲಿದ್ದುದು ಸುಸ್ಪಷ್ಟ. ತಮ್ಮ ತಂದೆ ಮಂಜುನಾಥ ನಾಯ್ಕರು ಆರಂಭಿಸಿದ್ದ 'ಶ್ರೀಕೃಷ್ಣ ಎಲಿಮೆಂಟರಿ ಶಾಲೆ'ಯ ಪುನರುಜ್ಜೀವನಕ್ಕೆ ಇವರು ಶ್ರಮಿಸಿದರು. 1960ರಲ್ಲಿ ಉಪ್ಪಿನಕುದ್ರು ದೇವರಾಯ ಉಡುಪರ ನೇತೃತ್ವದಲ್ಲಿ ಖಾರ್ವಿಕೇರಿಯಲ್ಲಿ ಫಿಶರೀಸ್ ಶಾಲೆಯ ಸ್ಥಾಪನೆಯಲ್ಲಿ ಇವರು ಪ್ರಮುಖ ಪಾತ್ರ ವಹಿಸಿದರು ಎನ್ನುವುದನ್ನು ವಿದ್ಯಾರಂಗ ಮಿತ್ರಮಂಡಳಿಯ ಬೆಳ್ಳಿಹಬ್ಬದ ಸ್ಮರಣ ಸಂಚಿಕೆ 'ಖಾರ್ವಿ ಚಿಂತನ' ದಾಖಲಿಸಿದೆ. ಈ ಶಾಲೆ ಪ್ರಸ್ತುತ ಉಡುಪಿ ಜಿಲ್ಲಾ ಪಂಚಾಯತ್ ಆಡಳಿತಕ್ಕೆ ಸೇರಿ ಶ್ರೀ ಧರ್ಮಸ್ಥಳ ಮಂಜುನಾಥ ಸ್ವಾಮಿ ಕೃಪಾಭವನದಲ್ಲಿ ಕಾರ್ಯನಿರ್ವಹಿಸುತ್ತಿದೆ. ನಾವು ಏಳೂ ಜನ ಅಣ್ಣ-ತಮ್ಮ-ತಂಗಿಯರಲ್ಲಿ 'ಅಕ್ಷರ'ದ ಮೊದಲ ಬೀಜ ಬಿತ್ತನೆಯಾಗಿದ್ದು ಇದೇ ಶಾಲೆಯಲ್ಲಿ ಎನ್ನುವುದು ಹೆಮ್ಮೆಯ ಸಂಗತಿ.

ಸ್ವಾತಂತ್ರ್ಯ ಹೋರಾಟದ ಪರ್ವ ಕಾಲದಲ್ಲಿ ಸಾಮಾಜಿಕ ಕಳಕಳಿಯನ್ನು ಮೇಳೈಸಿಕೊಂಡಿದ್ದ ಇವರ ಮೇಲೆ ಗಾಂಧಿವಾದದ ಪ್ರಭಾವ ದಟ್ಟವಾಗಿ ಬೀರಿದ್ದು ಸಹಜವಾಗಿಯೇ ಇತ್ತು. ಅಹಿಂಸೆ, ಶಿಕ್ಷಣ ಪ್ರಸಾರ, ಮದ್ಯಪಾನ-ವಿರೋಧಿ, ಪ್ರಾಣಿಬಲಿ-ವಿರೋಧಿ ನಿಲವುಗಳನ್ನು ಮೈಗೂಡಿಸಿಕೊಂಡು ಅವುಗಳ ಸಾಕಾರಕ್ಕೆ ಅಹರ್ನಿಶಿ ದುಡಿದಿದ್ದರ ಹಿಂದೆ ಅದರ ಪ್ರೇರಣೆಯೂ ಖಂಡಿತಕ್ಕೂ ಇದೆ.

ನ್ಯಾಯಾಂಗ ಇಲಾಖೆಯಲ್ಲಿನ ಕಾರ್ಯ ನಿರ್ವಹಣೆಯ ಅವಕಾಶ ಹಾಗೂ ಅನುಭವವನ್ನು ತಮ್ಮ ಸಮಾಜದವರ ಭೂಹೀನತೆಯ ಸಮಸ್ಯೆಯನ್ನು ಪರಿಹರಿಸುವ ನಿಟ್ಟಿನಲ್ಲಿ ಬಳಸಿಕೊಂಡು ಸಮಾಜ ಬಾಂಧವರ ಆರ್ಥಿಕ ಸಬಲತೆಗೆ ಶ್ರಮಿಸಿದರು.

ಮಾತೃ ಭಾಷೆ ಕೊಂಕಣಿ ಬಗೆಗಿನ ನನ್ನ ತಂದೆಯವರ ಪ್ರೀತಿ–ಕಾಳಜಿಯೂ ಅನನ್ಯವಾದುದು. ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿ ನಡೆಸಿದ್ದ ಅಂಚೆ ಕಾರ್ಡಿನಲ್ಲಿ ಕೊಂಕಣಿ ಕವನ ರಚನೆ ಸ್ಪರ್ಧೆಯಲ್ಲಿ 73ರ ಇಳಿ ವಯಸ್ಸಿನಲ್ಲಿ ಭಾಗವಹಿಸಿ ಪ್ರಥಮ ಬಹುಮಾನ ಗಳಿಸಿದ್ದು ಇದಕ್ಕೊಂದು ಅಪರೂಪದ ಉದಾಹರಣೆಯಾಗಿದ್ದು ಅವರ ಜೀವನ ಪ್ರೀತಿಗೂ ದೃಷ್ಟಾಂತವಾಗಿ ನಿಲ್ಲುತ್ತದೆ. ಬೆಂಗಳೂರಿನಿಂದ ಪ್ರಕಟವಾಗುತ್ತಿದ್ದ 'ಕೊಂಕಣಿ ಸೌರಭ್' ಕೊಂಕಣಿ ತ್ರೈಮಾಸಿಕದ ಗೌರವ ಸಂಪಾದಕರಾಗಿದ್ದರು. 'ಪಂಚ್ಕಾದಾಯಿ', 'ಕೊಂಕಣಿ ಸೌರಭ್' ಅಲ್ಲದೆ ಹಲವು ಸ್ಮರಣ ಸಂಚಿಕೆಗಳಲ್ಲಿ ಇವರ ಕೊಂಕಣಿ, ಕನ್ನಡ ಗೀತೆಗಳು ಪ್ರಕಟವಾಗಿವೆ. ಇವರು ಬರೆದ 'ವಿದ್ಯಾರಂಗ ಉದಯ ತರಂಗ' ಹಾಡು ವಿದ್ಯಾರಂಗ ಮಿತ್ರ ಮಂಡಳಿಯ ಧ್ಯೇಯಗೀತೆ ಆಗಿರುವುದು ಹೆಮ್ಮೆಯ ಸಂಗತಿ. ಕರ್ನಾಟಕ ಸರಕಾರದ ಕೊಂಕಣಿ ಭಾಷಾ ಪಠ್ಯದಲ್ಲೂ ಇವರ ಕೃತಿಗೆ ಸ್ಥಾನ ದೊರಕಿರುವುದು ಇವರ ಕೊಂಕಣಿ ಸಾಹಿತ್ಯ ಪ್ರೌಢಿಮೆಗೆ ಹಿಡಿದ ಕನ್ನಡಿಯಾಗಿದೆ.

ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿ ತಾನಾಗಿಯೇ ಮುಂದೆ ಬಂದು 2008ರಲ್ಲಿ ಜೀವಮಾನ ಸಾಧನೆಗಾಗಿ ನೀಡಿದ 'ಲೋಕವೇದ' ಪ್ರಶಸ್ತಿಯೇ ಇವರು ಗಳಿಸಿದ ಏಕೈಕ ಪ್ರಶಸ್ತಿ. ಇಂಥ ಪ್ರಶಸ್ತಿ–ಪುರಸ್ಕಾರಗಳಿಗೆ ಎಂದೂ ಹಾತೊರೆಯದ, ಅಕ್ಷರಶಃ ಎಲೆಮರೆ ಕಾಯಿಯಂತೆ ಪ್ರಾಂಜಲ ಮನಸ್ಸಿನಿಂದ ಕೆಲಸ ನಿರ್ವಹಿಸಿದ ನನ್ನ ತಂದೆ 15.06.2009ರಂದು ನಿಧನರಾದರು. ಅವರು ಜನಿಸಿದ್ದು 11.02.1929ರಂದು. ಕೆ. ಮಂಜುನಾಥ ನಾಯ್ಕ್ ಮತ್ತು ಪಾರ್ವತಿಬಾಯಿಯವರ ಐವರು ಮಕ್ಕಳಲ್ಲಿ ಇವರು ಹಿರಿಯರು. ಅಲ್ಲಿಂದಾಚೆ ತಮಗೆ ಸಾಮಾಜಿಕ ಪ್ರಜ್ಞೆ ಬಂದಾಗಿನಿಂದಲೂ ನಿಷ್ಕಲ್ಮಶ ಮನಸ್ಸಿನಿಂದ ತಾನು ಹುಟ್ಟಿದ ಸಮಾಜಕ್ಕೆ ಏನನ್ನಾದರೂ ಮಾಡಬೇಕೆಂಬ ತುಡಿತದಿಂದ ತನು–ಮನ–ಧನಗಳಿಂದ ದುಡಿಯುತ್ತಲೇ ಇದ್ದರು ದೇಹದಲ್ಲಿ ಶಕ್ತಿ ಇರುವವರೆಗೆ.

ತಂದೆಯವರು ಯಾವತ್ತೂ ಪ್ರಚಾರದ ಗೀಳಿನಿಂದ ದೂರವೇ ಇದ್ದವರು. ಅಧಿಕಾರದ ವ್ಯಾಮೋಹಕ್ಕೂ ಒಳಗಾದವರಲ್ಲ. ಸ್ವತಃ ತಾವೇ ಸ್ಥಾಪಿಸಿದ ಸಂಘ–ಸಂಸ್ಥೆಗಳಲ್ಲೂ ಅವರು ಯಾವತ್ತೂ ಪದಾಧಿಕಾರಿಯಾದವರಲ್ಲ. ತಾನೊಬ್ಬ ಸರಕಾರಿ ನೌಕರ ಎಂಬುದು ಅದಕ್ಕೆ ಒಂದು ಕಾರಣವಾದರೆ ತರುಣರು ನಾಯಕತ್ವ ಗುಣ ಬೆಳೆಸಿಕೊಳ್ಳಬೇಕೆಂಬ ಹಂಬಲದಿಂದ ಅವರು ಹಾಗೆ ಮಾಡಿದರು. ಸರಕಾರಿ ನೌಕರರಾದರೂ ಸಾಮಾಜಿಕ ಸಂಸ್ಥೆಗಳಲ್ಲಿ ಪದಾಧಿಕಾರಿಯಾಗಿ

ಸಕ್ರಿಯವಾಗಿ ಗುರುತಿಸಿಕೊಳ್ಳುವುದು ತಪ್ಪೇನೂ ಅಲ್ಲ. ಆದರೂ ತಂದೆಯವರು ತಮ್ಮ ಜೀವಿತಾವಧಿಯಲ್ಲಿ ಯಾವತ್ತೂ ಪದಾಧಿಕಾರಿಯಾಗದೆ ಸಂಘ–ಸಂಸ್ಥೆಗಳ ಚೇತನವಾಗಿ ಉಳಿದರು.

"ಮಂದಿಯ ಕೈಚಪ್ಪಾಳೆ, ವೃತ್ತಪತ್ರಿಕೆಗಳ ಅಗ್ಗದ ಸ್ತುತಿ, ಬಿರುದು ಬಾವಲಿಗಳ ವ್ಯಾಮೋಹ– ಇವುಗಳಿಗೆ ವಶನಾಗದೆ, ತಾನು ಹಿಡಿದ ಕೆಲಸವನ್ನು ಪಟ್ಟು ಹಿಡಿದು ನಿಃಶಬ್ದವಾಗಿ ಮಾಡುವಾತನೇ ನಿಜವಾದ ಕರ್ಮಯೋಗಿ" ಎಂದು ಕುವೆಂಪು ಹೇಳಿರುವ ರೀತಿಯಲ್ಲಿ ನಿಜ ಅರ್ಥದಲ್ಲಿ ಕರ್ಮಯೋಗಿ ಆಗಿದ್ದವರು ನನ್ನ ತಂದೆಯವರು.

ನನ್ನ ಅಣ್ಣ ಕೆ.ವಿ. ವಿಜಯಕುಮಾರ್ ತಂದೆ ಸ್ಥಾಪಕರಾಗಿರುವ ವಿದ್ಯಾರಂಗ ಮಿತ್ರಮಂಡಳಿಯ ಅಧ್ಯಕ್ಷನಾಗಿ ಹಾಗೂ ತಮ್ಮ ಕೆ.ವಿ. ಸಂಜಯಕುಮಾರ್ ಕಾರ್ಯದರ್ಶಿಯಾಗಿ ಕೆಲಸ ಮಾಡಿದ್ದು ನಮಗೆ ಹೆಮ್ಮೆಯೆನಿಸುತ್ತದೆ.

ಮೂಢನಂಬಿಕೆಗಳು, ಪ್ರಾಣಿ ಬಲಿ ಆಚರಣೆ ಬಗ್ಗೆ ತಂದೆಯವರಲ್ಲಿ ಅದೆಷ್ಟು ಸಿಟ್ಟಿತ್ತೆಂದರೆ ಬಲಿ ಪದ್ಧತಿ ಬೆಳೆದುಬಂದ ಬಗೆಯನ್ನು ವಿವರಿಸಿ ನಾನು ಬರೆದು ಅದಾಗಲೇ ಪ್ರಕಟವಾದ ಲೇಖನವೊಂದನ್ನು ಸ್ವತಃ ಒಂದು ದೇವಸ್ಥಾನದ ವಾರ್ಷಿಕ ಸಂಚಿಕೆಯಲ್ಲಿ ಪ್ರಕಟವಾಗುವಂತೆ ನೋಡಿಕೊಂಡಿದ್ದರು. ಅದು ಅವರ ಕೆಚ್ಚು ಹಾಗೂ ಧೈರ್ಯವಾಗಿತ್ತು.

ನಾವು ಎಲ್ಲಾ ಏಳು ಮಂದಿ ಅಣ್ಣ–ತಮ್ಮಂದಿರು ಹಾಗೂ ತಂಗಿಯರು ಬಹುತೇಕವಾಗಿ ಪ್ರಾಥಮಿಕ ಶಿಕ್ಷಣ ಪಡೆದಿದ್ದು ಗರ್ಲ್ಸ್ ಸ್ಕೂಲ್ ಎಂದೇ ಪರಿಚಿತವಾಗಿರುವ ಸರಕಾರಿ ಹಿರಿಯ ಪ್ರಾಥಮಿಕ ಶಾಲೆಯಲ್ಲಿ. ಅಲ್ಲೇ ಸಮೀಪದಲ್ಲಿದ್ದ ಕೋರ್ಟ್‌ಗೆ ತಂದೆಯವರು ಪ್ರತಿದಿನ ನಡೆದು ಹೋಗುತ್ತಿದ್ದುದನ್ನು ನಾನು ಆರನೇ ತರಗತಿಯಲ್ಲಿದ್ದಾಗ ಕೊಠಡಿಯಿಂದ ನೋಡುತ್ತಿದ್ದೆ.

ಊಟದ ಬಿಡುವಿನ ವೇಳೆಯಲ್ಲಿ ಅಪ್ಪನನ್ನು ನೋಡಿಕೊಂಡು ಬರೋಣವೆಂದು ಆಗೊಮ್ಮೆ ಈಗೊಮ್ಮೆ ನಾನು, ಅಣ್ಣ ಅಥವಾ ಯಾರಾದರೂ ತಮ್ಮನ ಜೊತೆ ಕೋರ್ಟ್‌ಗೆ ಹೋದರೆ ಅಲ್ಲಿ ಅವರನ್ನು ಹುಡುಕುವುದೇ ದುಸ್ತರವಾಗುತ್ತಿತ್ತು. ಯಾಕೆಂದರೆ ಅವರು ಸದಾ ಫೈಲ್‌ಗಳಲ್ಲಿ ಮಗ್ನವಾಗಿರುತ್ತಿದ್ದರು. ಹೆಚ್ಚಾಗಿ ತಮ್ಮ ಸಮಾಜಕ್ಕೆ ಸೇರಿದ ಬಡಜನರಿಗೆ ಸಂಬಂಧಿಸಿದ ಭೂಸುಧಾರಣೆ ಸಂಬಂಧಿ ಕಡತಗಳನ್ನು ಹುಡುಕಿ ಅವುಗಳ ಸೂಕ್ತ ವಿಲೇವಾರಿಗಾಗಿಯೇ ಅವರು ಬಿಡುವಿನ ವೇಳೆಯನ್ನು ಕಳೆಯುತ್ತಿದ್ದರು. ಅದು ಅವರ ಸಾಮಾಜಿಕ ಬದ್ಧತೆಯ ದ್ಯೋತಕವಾಗಿತ್ತು.

ತಳ ಸಮುದಾಯದ ಶ್ರಮಜೀವಿ ಸಮಾಜಕ್ಕೆ ಅಸ್ಮಿತೆ ಕೊಡಿಸಲು ನಿರಂತರ ಶ್ರಮಿಸಿದರು.

ಹೀಗೆ ನನ್ನ ತಂದೆಯವರ ಸಾಮಾಜಿಕ ಕಾಳಜಿ, ಬದ್ಧತೆ ಬಗ್ಗೆ ಹೇಳುತ್ತಲೇ ಹೋಗಬಹುದು. ಊಟ-ತಿಂಡಿ-ನಿದ್ದೆಯನ್ನೂ ಮರೆತು ಅವರು ಕಾರ್ಯ ನಿರ್ವಹಿಸುತ್ತಿದ್ದರು ಎನ್ನುವ ಒಂದೇ ಸಾಲಿನಲ್ಲಿ ಅವರ ಈ ಗುಣವನ್ನು ಹಿಡಿದಿಡಬಹುದಾಗಿದೆ.

ನನ್ನಲ್ಲೇನಾದರೂ ಒಂಚೂರು ಸಾಮಾಜಿಕ ಕಾಳಜಿ ಎನ್ನುವುದು ಏನಾದರೂ ಇದ್ದಲ್ಲಿ ಅದು ತಂದೆಯವರ ಬಳುವಳಿಯೇ ಹೌದು. ಅವರ ಸಾಮಾಜಿಕ ಚಟುವಟಿಕೆಗಳನ್ನು ಬಾಲ್ಯದಿಂದಲೂ ಕಾಣುತ್ತಿದ್ದ ನನಗೆ ಅವರೇ ಪ್ರೇರಕ ಶಕ್ತಿ.

ಮೇಣದ ಬತ್ತಿಯಂತೆ ತಾನು ಉರಿದು ಸುತ್ತಲಿನವರಿಗೆ ಬೆಳಕು ನೀಡುತ್ತಿದ್ದ ನನ್ನ ತಂದೆ ನಮ್ಮೆಲ್ಲರ ಹೃದಯದಲ್ಲಿ ವಿರಾಜಮಾನರಾಗಿದ್ದಾರೆ.

ಹಾಗಂತ, ನಮ್ಮ ತಂದೆಯರಿಗಿಂತ ಮುನ್ನ ಖಾರ್ವಿ ಸಮಾಜದಲ್ಲ ಸಾಮಾಜಿಕ ಕಾಳಜಿ ಯಾರಲ್ಲೂ ಇದ್ದಿರಲಿಲ್ಲ ಎಂದಾಗಲೀ ಆನಂತರದಲ್ಲಿ ಸಮಾಜದಲ್ಲಿ ಆದ ಬದಲಾವಣೆಗಳಿಗೆ ತಂದೆಯವರೊಬ್ಬರೇ ಕಾರಣರೆಂದು ಹೇಳುವುದಾಗಲೀ ನನ್ನ ಉದ್ದೇಶವಲ್ಲ. ಆದರೆ ಸಾಮಾಜಿಕ ಕಾಳಜಿಗೊಂದು ಮೂರ್ತರೂಪ ಕೊಟ್ಟು ಅರಿವಿನ ದಿಗಂತವನ್ನು ವಿಸ್ತರಿಸುವಲ್ಲಿ ಅವರ ಪಾತ್ರ ಅಪಾರವಾದುದು, ಅನನ್ಯವಾದುದು ಎನ್ನುವುದು ಮಾತ್ರ ಅಲ್ಲಗಳೆಯಲಾಗದ ಸಂಗತಿ.

ಸಾಮಾಜಿಕ ಕಾರ್ಯ ಎಂಬುದಕ್ಕೆ ಜೀವಂತ ಪರ್ಯಾಯ ಪದದಂತಿದ್ದ ಅವರು ಹಚ್ಚಿದ ಜ್ಞಾನದ ಹಣತೆಯಲ್ಲಿ ಜೀವನದ ಬೆಳಕನ್ನು ಕಂಡವರು, ಅವರ ಇತರೆ ಕಾರ್ಯ, ಮಾರ್ಗದರ್ಶನಗಳಿಂದ ನೆರವು ಪಡೆದವರು ಆದಿಯಾಗಿ ಎಲ್ಲರೂ ಅವರನ್ನು ನೆನೆಸುತ್ತಾ ಆ ದೀಪದ ಬೆಳಕು ಆರದಂತೆ ಮುಂದಕ್ಕೊಯ್ಯುವುದೇ ಅವರಿಗೆ ಸಲ್ಲಿಸುವ ಗೌರವವಾಗುತ್ತದೆ.

ಸ್ಥಾವರಕ್ಕಳಿವುಂಟು, ಜಂಗಮಕ್ಕಳಿವಿಲ್ಲ ಎನ್ನುವುದು ಇದಕ್ಕೇ ತಾನೆ?.

ಆರಂಭದಲ್ಲೇ ಹೇಳಿರುವಂತೆ, ಅವರ ಋಣವನ್ನು ತೀರಿಸಲಿಕ್ಕಾಗಿ ಅವರ ಜಾನಪದ ಸೊಗಡಿನ ಕೊಂಕಣಿ ಕವನಗಳನ್ನು ಹಾಗೂ ಬೆರಳೆಣಿಕೆಯ ಕನ್ನಡ ಕವನಗಳನ್ನು ದಾಖಲಿಸಬೇಕು ಎಂಬ ಹಂಬಲ ಅನೇಕ ವರ್ಷಗಳಿಂದ ನನ್ನಲ್ಲಿತ್ತು. ಇಂಥದ್ದೊಂದು ಕೃತಿಗೆ ಅವರು ಅತ್ಯಂತ ಅರ್ಹರು. ಈ ಮೂಲಕವಾದರೂ ಅವರ ನೆನಪನ್ನು ಅಕ್ಷರ ರೂಪದಲ್ಲಿ ದಾಖಲಿಸುವುದು ಅಗತ್ಯ ಎಂದು ಭಾವಿಸಿದೆ. ಕವನಗಳನ್ನು ದಾಖಲಿಸುವುದರೊಂದಿಗೆ ಅವರನ್ನು ಬಲ್ಲವರಿಂದ ಸಾಂಕೇತಿಕವಾಗಿ ಲೇಖನಗಳನ್ನು ಬರೆಸುವುದು ಉತ್ತಮ ಎಂದು ಭಾವಿಸಿ ಇದನ್ನು ಅವರ ಆತ್ಮೀಯ ಬಳಗಕ್ಕೆ ಸೇರಿದವರಾದ ಪ್ರೊ. ಎ.ವಿ. ನಾವಡ ಮತ್ತು ಡಾ. ನಾ. ಡಿಸೋಜರಲ್ಲಿ ವಿವರಿಸಿದಾಗ ಇಬ್ಬರೂ ಪ್ರೀತಿಯಿಂದ ಒಪ್ಪಿ ಲೇಖನಗಳನ್ನು ಬರೆದುಕೊಟ್ಟರು. ಶಿಪ್ಯಾ

ಗಣಪತಿ ಚಿಕ್ಕಪ್ಪ ಕೂಡ ಲೇಖನವನ್ನು ಕೊಟ್ಟರು. ತಂಗಿ ಕೆ.ವಿ. ವೀಣಾಕುಮಾರಿ ಕೂಡ ಲೇಖನ ಬರೆದಿದ್ದಾಳೆ.

ತಂದೆಯವರ ಕವನಗಳನ್ನು ಪುಸ್ತಕ ರೂಪದಲ್ಲಿ ತರಬೇಕೆಂದು ನಿರ್ಧರಿಸಿದಾಗ ಎದುರಾದ ದೊಡ್ಡ ಪ್ರಶ್ನೆ ಅವುಗಳು ಸಿಗುತ್ತವೆಯೇ ಎನ್ನುವುದು. ಆಗಲೇ ಹೇಳಿರುವಂತೆ ಅವರು ಪ್ರಚಾರಪ್ರಿಯರಲ್ಲ. ಹಾಗಾಗಿ ಬರಹಗಳನ್ನು ಸರಿಯಾಗಿ ಇಟ್ಟಿದ್ದಾರೋ ಇಲ್ಲವೋ ಎಂಬ ಚಿಂತೆ ಸಹಜವಾಗಿಯೇ ಕಾಡಿತ್ತು. ಆದರೆ ಅಚ್ಚರಿ ಎನ್ನುವಂತೆ ಅವರು ತಮ್ಮ ಎಲ್ಲಾ ಕವನಗಳನ್ನು ಒಂದು ಪುಸ್ತಕದಲ್ಲಿ ಬರೆದಿಟ್ಟಿದ್ದು ಅದನ್ನು ಸೋದರ ಸಂಜು (ಕೆ.ವಿ. ಸಂಜಯಕುಮಾರ್) ಹುಡುಕಿ ಕೊಟ್ಟಿದ್ದಾನೆ.

ಮನುಷ್ಯ ಬದುಕಿದ್ದಾಗಿನದಕ್ಕಿಂತ ಅವರು ನಮ್ಮಿಂದ ದೂರವಾದಾಗ ಅವರ ಮಹತ್ವ ಅರಿವಾಗುತ್ತದೆ ಎಂಬ ಮಾತು ತಂದೆಯವರ ವಿಚಾರದಲ್ಲೂ ನಿಜವಾಯಿತು ಅನಿಸುತ್ತದೆ. ಅವರು ಬದುಕಿದ್ದಾಗಲೇ ಕೃತಿಯನ್ನು ತಂದಿದ್ದರೆ ಚೆನ್ನಾಗಿತ್ತು ಎಂಬ ವಿಷಾದ ಈಗ ಕಾಡುತ್ತದೆ. ಅವರ ನಿಧನದ ನಂತರದಲ್ಲಿ ಪ್ರಕಟಿಸಬೇಕೆಂದು ಹೊರಟರೂ ಕಾರಣಾಂತರಗಳಿಂದ ಸಾಧ್ಯವಾಗಿರಲಿಲ್ಲ. ಇದಕ್ಕಾಗಿ 'ಸಾರಿ ಬಾಪ್ಪಾ' ಅನ್ನುವಾಗಲೇ, 'ಬೆಟರ್ ಲೇಟ್ ದ್ಯಾನ್ ನೆವರ್' ಎಂಬ ನುಡಿಯಂತೆ ಈಗಲಾದರೂ ಇದನ್ನು ಹೊರತರಲು ಸಾಧ್ಯವಾಗುತ್ತಿರುವುದಕ್ಕೆ ಸಂತೋಷವಿದೆ.

ಅಪ್ಪ ಬದುಕಿದ್ದಿದ್ದರೆ ಈಗ 90 ವರ್ಷ ತುಂಬುತ್ತಿತ್ತು. 80 ವರ್ಷಗಳ ತುಂಬು ಜೀವನವನ್ನು ಅರ್ಥಪೂರ್ಣವಾಗಿ ಬದುಕಿದ ಅವರಿಗೆ ಇದು ಅಕ್ಷರಶಃ ಅಕ್ಷರ ನಮನ.

ತಂದೆಯವರು ನಿಧನರಾಗಿ ಒಂದು ದಶಕ ತುಂಬುತ್ತಿರುವ ಈ ವರ್ಷ (2019), ಅವರ ಮಾನಸ ಶಿಶು 'ವಿದ್ಯಾರಂಗ ಮಿತ್ರಮಂಡಳಿ'ಯ ಸುವರ್ಣ ಮಹೋತ್ಸವ ವರ್ಷವೂ ಹೌದು. ಇಂಥದ್ದೊಂದು ವಿಶೇಷ ವರ್ಷದಲ್ಲಿ ಈ ಕೃತಿ ಪ್ರಕಟವಾಗುತ್ತಿರುವುದು ಕಾಕತಾಳೀಯವಾದರೂ ಇದೊಂದು ಸಾರ್ಥಕ ಸಂದರ್ಭವೆಂದು ಭಾವಿಸಬಹುದಾಗಿದೆ.

ಪುಸ್ತಕ ತರುವ ವಿಚಾರವಾಗಿ ಒಕ್ಕೊರಲಿನಿಂದ ಸಹಮತ ನೀಡಿ ಸಹಕರಿಸಿದ ಅಣ್ಣ ಕೆ.ವಿ. ವಿಜಯಕುಮಾರ್, ತಮ್ಮಂದಿರಾದ ಕೆ.ವಿ. ವಿವೇಕ್ (ವಿಕ್ಕಿ), ಕೆ.ವಿ. ಅಶೋಕಕುಮಾರ್, ಕೆ.ವಿ. ಸಂಜಯಕುಮಾರ್, ತಂಗಿಯರಾದ ಕೆ.ವಿ. ಉಷಾಕುಮಾರಿ, ಕೆ.ವಿ. ವೀಣಾಕುಮಾರಿ, ಬಾವಂದಿರಾದ ನೃತ್ಯ ವಿದ್ವಾನ್ ಎಸ್. ಎಂ. ಸುಧೀರ್ ಮತ್ತು ಕುಂದಾಪುರ ಪುರಸಭೆ ಸದಸ್ಯ ಎಚ್.ಎನ್. ಚಂದ್ರಶೇಖರ್ ಖಾರ್ವಿ ಇವರಿಗೆ ಧನ್ಯವಾದಗಳು. ನನ್ನ ಕಾರ್ಯದಲ್ಲಿ ಸಹಕರಿಸಿದ ಪತ್ನಿ ಮಮತಾ ಕುಂದಾಪುರ, ಮಗ ದೀಪಕ್ ಕುಂದಾಪುರ ಹಾಗೂ ಮಗಳು ದೀಪ್ತಿ ಕುಂದಾಪುರ

ಇವರಿಗೂ ನನ್ನ ಧನ್ಯವಾದಗಳು. ಆಪ್ತ ಲೇಖನಗಳನ್ನು ನೀಡಿದ ಪ್ರೊ. ಎ.ವಿ. ನಾವಡ, ಡಾ. ನಾ. ಡಿಸೋಜ, ಜಿ. ಗಣಪತಿ ಶಿಪ್ಪಾ ಮತ್ತು ಸಹೋದರಿ ವೀಣಾ ಇವರಿಗೂ ಧನ್ಯವಾದಗಳು.

ಇನ್ನು ತಾಯಿ ಗಂಗಾಬಾಯಿಯನ್ನು ನೆನೆಯದೇ ಇರಲು ಸಾಧ್ಯವೇ?. ತಂದೆಯವರು ತಮ್ಮ ಸಾಮಾಜಿಕ ಕಾರ್ಯಬಾಹುಳ್ಯದಿಂದಾಗಿ 'ಕುಟುಂಬದೊಳಗಿದ್ದೂ ಹೊರಗಿದ್ದಂತೆ ಇದ್ದಾಗ' ಆರ್ಥಿಕವಾಗಿಯೂ ಕೌಟುಂಬಿಕವಾಗಿಯೂ ಅನೇಕ ಕೌಟುಂಬಿಕ ಸಂಕಷ್ಟ, ತಾಪತ್ರಯ, ಕಿರಿಕಿರಿಗಳ ನಡುವೆಯೂ ದೊಡ್ಡ ಕುಟುಂಬವನ್ನು ಸಲಹಿದ ಆ ಮಹಾಮಾತೆಗೆ ಹೃದಯಪೂರ್ವಕ ನಮನಗಳು.

ಕೃತಿಯ ಯೋಜನೆ ಬಗ್ಗೆ ಹೇಳುತ್ತಲೇ ಇದನ್ನು ಪ್ರಕಟಿಸಲು ಒಪ್ಪಿದ ಆತ್ಮೀಯ ಗೆಳೆಯರೂ ಆದ 'ಜನಪ್ರತಿನಿಧಿ ಪ್ರಕಾಶನ'ದ ಸುಬ್ರಹ್ಮಣ್ಯ ಪಡುಕೋಣೆ ಇವರಿಗೂ ಕೃತಜ್ಞತೆಗಳು.

**– ವಿಶ್ವ ಕುಂದಾಪುರ**

ಕೋಲಾರ
01.08.2019

*********************

# ಖಾರ್ವಿಗಳ ನಡುವಿನ ಸಂತ

✍ – ಪ್ರೊ. ಎ.ವಿ. ನಾವಡ
ವಿಶ್ರಾಂತ ಪ್ರಾಧ್ಯಾಪಕ, ಡೀನ್
ಕನ್ನಡ ವಿಶ್ವ ವಿದ್ಯಾಲಯ, ಹಂಪಿ

ಇದು ಇಂದು ನಿನ್ನೆಯ ನೆನಪಲ್ಲ. ಸುಮಾರು ಐವತ್ತು ವರ್ಷಗಳ ಹಳೆಯದು. ಕುಂದಾಪುರ ನಗರದ ಒಳಗಿದ್ದೂ 'ಒಳಗಿನವರಾಗದ' ಮೀನುಗಾರ ಸಮುದಾಯ ಖಾರ್ವಿಗಳ ಬಗೆಗೆ ಬರೆಯಬೇಕು, ಅವರ ಬದುಕನ್ನು ಬಗೆಯಬೇಕು ಎನ್ನುವ ಬಯಕೆಯಿಂದ ಖಾರ್ವಿಕೇರಿಯ ಸಮೀಪವಿದ್ದ ಖಾರ್ವಿ ಬಂಧು ಕೆ. ವಾಸುದೇವ ನಾಯ್ಕರ ಮನೆಗೆ ತೆರಳಿದೆ. ಆಗ ಸಂಜೆ ಇಳಿದು ಮುಸ್ಸಂಜೆ ತಲೆ ಹಾಕಿತ್ತು. ಹಂಚು ಹೊದಿಸಿದ್ದ ಚಿಕ್ಕ ಮನೆ. (ಆ ಮೇಲೆ ತಿಳಿಯಿತು; ಮನೆ ನೋಡಾ ಬಡವರು, ಮನ ನೋಡಾ ಘನರು- ಬಸವಣ್ಣ). ಅಂಗಳದಿಂದ ಒಳಗೆ ಕಾಲಿರಿಸಿದಾಗ ಸುಮಾರು ನಾಲ್ವತ್ತು ವರ್ಷ ವಯಸ್ಸಿನ ಹಿರಿಯರೊಬ್ಬರು ಬಂದು ಪ್ರೀತಿಯಿಂದ ಸ್ವಾಗತಿಸಿದರು. ಒಳಗೆ ಹೋದರೆ ಚಾವಡಿಯಲ್ಲಿ ಒಂದೆರಡು ಪೀಠೋಪಕರಣ ಮಾತ್ರ. ವಿದ್ಯುತ್ ಸಂಪರ್ಕ ಇನ್ನೂ ಬಂದಿಲ್ಲ. ಅಲ್ಲೇ ಒಂದೆಡೆ ಲಾಟೀನು ಬೆಳಕಿನಲ್ಲಿ ಮೂರು- ನಾಲ್ಕು ಮಕ್ಕಳು ಓದುತ್ತಿದ್ದರು. ಲಾಟೀನ್‌ನ ಮಬ್ಬು ಬೆಳಕಿನಲ್ಲಿಯೂ ಅವರ ಮುಖ ಎದ್ದು ಕಾಣುತ್ತಿತ್ತು. ಉಟ್ಟ ಬಣ್ಣದ ಲುಂಗಿ. ಹೆಗಲ ಮೇಲೆ ಒಂದು ಚಿಕ್ಕ ಬಟ್ಟೆ. ಮೊದಲಿಗೆ ನಮ್ಮಿಬ್ಬರ ನಡುವೆ ಪರಿಚಯದ ವಿನಿಮಯ. ಬಂದ ಉದ್ದೇಶವನ್ನು ಸಂಕ್ಷಿಪ್ತವಾಗಿ ನಿವೇದಿಸಿಕೊಂಡೆ. ಸ್ವತಃ 'ಒಳಗಿನವರಾದ' ತಾವು ಮಾಹಿತಿ ನೀಡಿ ಸಹಕರಿಸಬೇಕಾಗಿ ಕೇಳಿಕೊಂಡೆ. ತಮ್ಮ ಸಮುದಾಯದ ಬಂಧುಗಳ ಅಂದಿನ ಇರವಿನ ಬಗೆಗೆ ಅವರು ಅಷ್ಟೊಂದು ಉಲ್ಲಸಿತರಿಲ್ಲ ಎಂಬುದನ್ನು ಊಹಿಸಿಕೊಂಡೆ. ಅವರು ಒಳಗಿನವರಾಗಿದ್ದೂ ಹೊರಗಿನವರಂತಿದ್ದರು-ಗೇರುಹಣ್ಣಿನ ಬೀಜ ಹೊರಗಿರುವಂತೆ.

ಖಾರ್ವಿಗಳ ಹಿಂದಣ ಕತೆಯನ್ನು ಎಳೆ ಎಳೆಯಾಗಿ ಹೇಳುತ್ತಾ ಹೋದರು. ಖಾರ್ವಿಗಳು ನೆಲೆಸಿದ ಕಾಲದ ಸ್ಥಿತಿಯನ್ನು ಹೇಳಿದರು. ತನ್ನ ಜನರ ಬದುಕಿನ ದುಸ್ಥಿತಿಯನ್ನು ಹೇಳುವಾಗ ಅಷ್ಟೊಂದು ಲವಲವಿಕೆ ತೋರಿಬರಲಿಲ್ಲ. ಕುಂದಾಪುರದ ಖಾರ್ವಿಕೇರಿ, ಮದ್ದುಗುಡ್ಡೆ, ಗಂಗೊಳ್ಳಿ, ತ್ರಾಸಿಯ ಕಡಲ ದಂಡೆಯಲ್ಲಿ ಸ್ವಂತ ನೆಲದ ಬಲವಿಲ್ಲದ, ಜೋಪಡಿ ಮನೆಗಳಲ್ಲೇ ವಾಸಿಸುತ್ತಿರುವ ಅವರ ಬದುಕಿನ ದಾರುಣ ಕತೆಯನ್ನು ಹೇಳುತ್ತಾ ಹೋದರು (ಮುಂದೆ ಅವರ ಜತೆ ಹಲವು ಕೂರುಗಳಲ್ಲಿ ವಿಷಯ ಸಂಗ್ರಹಿಸುತ್ತಾ ಹೋದೆ). ನಾನು ಗ್ರಹಿಸಿಕೊಂಡಂತೆ ಸ್ವಂತ ನೆಲ-ಜಲದ ಕಲ್ಪನೆಯೂ ಇಲ್ಲದ ಖಾರ್ವಿಗಳು ಒಳ್ಳೆಯ ಅರ್ಥದಲ್ಲಿ ಹುಂಬರು. ಆ ಕಾಲದ

ಖಾರ್ವಿಗಳ ಬದುಕಿನ ಚಿತ್ರಣವನ್ನು ದಾಖಲಿಸಿಕೊಂಡು ನನಗೆ ಅನಿಸಿದ್ದನ್ನು ಬರೆದೆ. ಆದರೆ ಇಂದು ಆ ಸಮಾಜ ತಮ್ಮೊಳಗಿನ ಅರಿವಿನ ಶೋಧ, ಸ್ವಪರಿಶ್ರಮ ಹಾಗೂ ಸರಕಾರದ ಯೋಜನೆಗಳನ್ನು ಚೆನ್ನಾಗಿಯೇ ಬಳಸಿಕೊಂಡು, ದುಡಿಸಿಕೊಂಡು 'ಸಂಪೂರ್ಣ' ಬದಲಾವಣೆಗೆ ಒಳಗಾಗಿದ್ದಾರೆ. ಅಂದು ಸಾಂಪ್ರದಾಯಿಕ ನಾಡ ದೋಣಿಗಳನ್ನು ಮಾತ್ರ ನೆಚ್ಚಿಕೊಂಡಿದ್ದು ದೊರೆತ ಪುಡಿಗಾಸಿನ ಆದಾಯದ ಮೇಲೆಯೇ ಬದುಕುವ ದುಸ್ಥಿತಿ ಅವರಿಗಿತ್ತು. ಮನೆಯ ಮಹಿಳೆಯರು ಕಡಲ ದಡದಲ್ಲಿ ಗಂಡಸರು ಹಿಡಿದು ತಂದ ಮೀನನ್ನು ಸಂಜೆ ಹೊತ್ತು ಮಾರಿ ಮಕ್ಕಳ ಹೊಟ್ಟೆ ಹೊರೆಯುತ್ತಿದ್ದರು. ಹೆಣ್ಣು ಮಕ್ಕಳು ದೊಡ್ಡವರ ಮನೆಗಳಲ್ಲಿ ಕಸಮುಸುರೆ ತಿಕ್ಕುವುದರಲ್ಲೇ ತಮ್ಮ 'ಅನ್ನ'ವನ್ನು ಕಂಡುಕೊಳ್ಳುತ್ತಿದ್ದರು.

ಅಂದು ನಾನು ಕಂಡ ಖಾರ್ವಿಕೇರಿ ಮಹಾನಗರಗಳಲ್ಲಿನ ಸ್ಲಂಗಳಿಗಿಂತ ಭಿನ್ನವಾಗಿರಲಿಲ್ಲ. ಕಡಲ ದಂಡೆಯಲ್ಲಿ ಸರಕಾರಿ ಜಮೀನಿನಲ್ಲೇ ಜೋಪಡಿ ಕಟ್ಟಿಕೊಂಡು ಬದುಕುತ್ತಿದ್ದರು. ಸಾರ್ವಜನಿಕ ಶೌಚಾಲಯ, ಸಾರ್ವಜನಿಕ ಬಾವಿಯ ನೀರೇ ಗತಿ ಅವರಿಗೆ. ಕಾಯಿಲೆ ಕಸಾಲೆಗಳಿಂದ ನಿತ್ಯ ನರಕ ಯಾತನೆ. ಆದರೆ ಕುಂದಾಪುರದ 'ಮುಂದುವರಿದ' ಮಂದಿಗೆ ಖಾರ್ವಿಗಳ ಬಗೆಗೆ ಅಪಾರ ಗೌರವ. ಅವರು ಪ್ರಾಮಾಣಿಕರು, ಕಷ್ಟಸಹಿಷ್ಣುಗಳು ಮತ್ತು ಶ್ರಮಜೀವಿಗಳು ಎಂದು.

ಮುಂದಿನ ದಿನಗಳಲ್ಲಿ ಖಾರ್ವಿ ಸಮುದಾಯದ ಒಳಗೇ ನಾವೂ ಎಲ್ಲರಂತಾಗಬೇಕು ಎನ್ನುವ ಛಲದ ಕಿಚ್ಚು ಹತ್ತಿಕೊಂಡು, ಸರಕಾರದ ಹಾಗೂ ಖಾಸಗಿ ಮಂದಿಯ ನೆರವಿನೊಂದಿಗೆ ಮುಖ್ಯ ವಾಹಿನಿಗೆ ಬಂದ ಕತೆಯನ್ನು ಹೇಳುವಾಗ ವಾಸುದೇವ ನಾಯ್ಕರಿಗೆ ಎಲ್ಲಿಲ್ಲದ ಉತ್ಸಾಹ, ತೃಪ್ತಿಯ ಸಮಾಧಾನ ಕಾಣಿಸುತ್ತಿತ್ತು. ಆದರೆ ಆಗೊಮ್ಮೆ ಈಗೊಮ್ಮೆ ಅವರ ಮಾತಿನ ಎಳೆಯಲ್ಲಿ ಅತೃಪ್ತಿಯೂ ವಿಷಾದವೂ ಗೋಚರಿಸುತ್ತಿತ್ತು. ಆರ್ಥಿಕ ಅಭಿವೃದ್ಧಿಯ ಜತೆಗೆ ಸಾಂಸ್ಕೃತಿಕ ಅಭಿವೃದ್ಧಿಯ ಕಡೆಗೆ ತಮ್ಮ ಜನರು ಗಮನ ಹರಿಸದಿರುವ ಬಗ್ಗೆ ಅವರಿಗೆ ಅತೃಪ್ತಿ ಇತ್ತು. ಗೋವಾ-ರತ್ನಗಿರಿ ಭಾಗದಿಂದ ಪೋರ್ಚುಗೀಸರ ದೌರ್ಜನ್ಯ ಸಹಿಸಲಾಗದೆ ಓಡಿಬಂದ ಬಗೆಗೆ ತಾನು ಕೇಳಿದ ಕತೆಯನ್ನು ಹೇಳಿದರು. ತನಗೆ ಬಾಯಿಗೆ ಬರುತ್ತಿದ್ದ ಕೆಲವೊಂದು ಖಾರ್ವಿ ಜನಪದ ಹಾಡುಗಳನ್ನು ಹೇಳಿ ಅದರ ಅರ್ಥವನ್ನು ವಿವರಿಸಿ ಹೇಳಿದರು. ಉತ್ತರದ ಕರಾವಳಿಯಿಂದ ಉಟ್ಟ ಬಟ್ಟೆಯಲ್ಲಿ ಹರಕಲು ಬಲೆಗಳೊಂದಿಗೆ ಬಂದ ನೋವಿನ ಕತೆಯನ್ನು ಹೇಳಿದರು. ಮೀನುಗಾರಿಕೆ ಜತೆಗೆ ಬ್ರಿಟಿಷ್ ಕಾಲದಲ್ಲಿ ಗಂಗೊಳ್ಳಿ, ಬೈಂದೂರು, ಶಿರೂರು, ಭಟ್ಕಳ ಮುಂತಾದ ಕಡಲ ಧಕ್ಕೆಗಳಲ್ಲಿ ಹಡಗುಗಳನ್ನು ಒಳಗೆ ತರುವ, ಹೊರಕ್ಕೆ ಕೊಂಡೊಯ್ಯುವ 'ಆರ್ಕಾಟಿಗಳು' ತಮ್ಮವರಾಗಿದ್ದರೆಂಬ ಇತಿಹಾಸದ ನೆನಪನ್ನು ಮುಂದಿಟ್ಟರು. ಕರಾವಳಿಯ ಮೊಗವೀರರಷ್ಟು ಸಂಘಟನಾ ಶಕ್ತಿಯಾಗಲೀ, ಆರ್ಥಿಕ ಚೈತನ್ಯವನ್ನಾಗಲೀ, ರಾಜಕೀಯ ಇಚ್ಛಾಶಕ್ತಿಯಾಗಲೀ ತಮ್ಮವರಿಗಿಲ್ಲ ಎನ್ನುವಾಗ ನೋವಿನ ಕ್ಷೀಣ ದನಿಯೊಂದು ಅಶ್ರುತ ದನಿಯಾಗಿ

ಕೇಳಿಸುತ್ತಿತ್ತು. ಹಾಗೆಂದು ಸರಕಾರ ತಮ್ಮನ್ನು ಗಮನಿಸುತ್ತಿಲ್ಲ, ಅಭಿವೃದ್ಧಿಗಾಗಿ ಸ್ಪಂದಿಸುತ್ತಿಲ್ಲ ಎಂಬ ಆಕ್ರೋಶವೂ ಇರಲಿಲ್ಲ. ನಮ್ಮ ಜನರಿಗೆ ಓದಿನ ಮಹತ್ವ ತಿಳಿದಿಲ್ಲ, ದುಡಿಮೆಯ ಫಲವನ್ನು ನಿರ್ನಾಮ ಮಾಡುವ ದುಷ್ಟ ಚಾಳಿಗಳಿಂದ ಬಿಡುಗಡೆ ಪಡೆಯುತ್ತಿಲ್ಲವೆಂಬ ಕೊರಗು ಅವರಲ್ಲಿತ್ತು. ಓದಿನ ಮಹತ್ವ ತಿಳಿದಿಲ್ಲವಲ್ಲ ಎನ್ನುವ ವಿಷಾದ ಅವರಲ್ಲಿತ್ತು. ಕುಂದಾಪುರ ಕಾಲೇಜಿನ ಎನ್‌ಸಿಸಿ ಅಧಿಕಾರಿಯಾಗಿದ್ದ ನಾನು ಅವರ ಕೇರಿಯಲ್ಲಿ ಎನ್‌ಸಿಸಿ ವಿದ್ಯಾರ್ಥಿಗಳಿಂದ ಸಂಜೆ ಹೊತ್ತಿಗೆ ಅಕ್ಷರ ವಿದ್ಯೆ ತಿಳಿಸುವ ತರಗತಿ ಆರಂಭಿಸಿದಾಗ ಅವಿದ್ಯಾವಂತ ಖಾರ್ವಿ ಹಿರಿಯ ಬಂಧುಗಳನ್ನು ತರಗತಿಗೆ ಬರುವಂತೆ ವಾಸುದೇವ ನಾಯ್ಕರು ಒತ್ತಾಯಿಸಿದ್ದನ್ನು ನಾನು ಕಂಡಿದ್ದೇನೆ.

ಒಮ್ಮೆ ವಾಸುದೇವ ನಾಯ್ಕರು ಹೇಳಿದರು. “ನಮ್ಮ ಜನ ಸ್ವಲ್ಪ ಶೋಕಿಗಳು. ಬಲೆಯೊಳಗೆ ಹೆಚ್ಚು ಮೀನು ಬಿತ್ತೆಂದರೆ ಆ ದಿನ ಮನೆಮಂದಿಗೆಲ್ಲ ದೊಡ್ಡ ಹಬ್ಬ. ಹೆಂಡತಿ, ಮಕ್ಕಳಿಗೆ ಬಟ್ಟೆ, ತಿಂಡಿ-ತಿನಿಸುಗಳನ್ನು ಸಂಭ್ರಮದಿಂದ ತರುತ್ತಿದ್ದರು. ಅಂದು ಎಂದಿಗಿಂತ ‘ಎಣ್ಣೆ’ಯ ಬಳಕೆಯೂ ತುಸು ಹೆಚ್ಚು. ಅಂದರೆ ‘ನಾಳಿನ ಕತೆ ನಾರಾಯಣನೇ ಬಲ್ಲ’ ಎನ್ನುವ ಜನ ಅವರು”. ಹಾಗೆಂದರೆ ನಾಳೆಗೆ ಕೂಡಿಡುವ ಅಭ್ಯಾಸ ಅವರಿಗೆ ಗೊತ್ತೇ ಇಲ್ಲ.

ವಾಸುದೇವ ನಾಯ್ಕರು ಖಾರ್ವಿಗಳ ಜನನಾಯಕರಾಗಿರಲಿಲ್ಲ. ತನ್ನೆಡೆಗೆ ಬಂದವರಿಗೆ ಸಮುದಾಯ ತಲುಪಬೇಕಾದ ಎತ್ತರ, ತರಬೇಕಾದ ಪರಿವರ್ತನೆಯ ಬಗ್ಗೆ ಅನೇಕ ಕಿವಿಮಾತುಗಳನ್ನು ಹೇಳುತ್ತಿದ್ದರು. ತನ್ನ ಸೌಜನ್ಯಯುತ ನಡೆ-ನುಡಿಗಳಿಂದಲೇ ತಮ್ಮವರಿಗೆ ಸರಿದಾರಿಯನ್ನು ಸೂಚಿಸುತ್ತಿದ್ದರು. ಹೀಗಾಗಿ ಅವರ ಕುಲಬಾಂಧವರಿಗೆ ಅವರ ಬಗೆಗೆ ವಿಶೇಷ ಗೌರವ; ದೂರದಿಂದಲೇ ಗೌರವ ವಂದನೆ. ಅವರ ಮಾತುಗಳಲ್ಲಿ ತಮ್ಮವರ ಬಗ್ಗೆ ಸಣ್ಣಮಟ್ಟಿನ ಅಸಹನೆ, ಸಿಟ್ಟು ಕೂಡ ತೋರಿ ಬರುತ್ತಿತ್ತು. ಕಾರಣ ಇಷ್ಟೆ. ಅವರಿಗೆ ಅಡ್ಡ ದಾರಿ ತುಳಿವವರನ್ನು, ಕೆಟ್ಟ ಚಾಳಿ ಮೈಗೂಡಿಸಿಕೊಂಡವರನ್ನು ಕಂಡರೆ ಎಲ್ಲಿಲ್ಲದ ಸಿಟ್ಟು. ಹಾಗೆಂದು ಅವರನ್ನು ಅವರ ಪಾಡಿಗೆ ಬಿಡದೆ, ಕೈಹಿಡಿದು ಎರಡು ಬೈಗಳ ಮಾತುಗಳನ್ನಾಡಿ, ಮನೆಗೆ ಕರೆತಂದು ಚಾ ಕೊಟ್ಟು ಮತ್ತೆ ಪ್ರೀತಿಯ ಉಪದೇಶ ಮಾಡಿ ಮನೆಗೆ ಕಳುಹಿಸಿ ಕೊಡುತ್ತಿದ್ದರು. ಅವರ ಈ ಬಗೆಯ ವರ್ತನೆ ಸಮಾಜದ ನಡುವೆ ಒಳ್ಳೆಯ ಪರಿಣಾಮ ಬೀರಿರುವುದಾಗಿ ಕೇಳಿದ್ದೇನೆ. ಹಾಗೆಂದು ಅವರು ತಮ್ಮ ಕುಲಬಾಂಧವರಿಗೆ ಸಾರ್ವಜನಿಕ ಉಪದೇಶಗಳನ್ನು ಮಾಡುತ್ತಿರಲಿಲ್ಲ. ಜಾತಿ ಸಂಘಟನೆಯ ಕಾರ್ಯಕ್ರಮಗಳಲ್ಲಿ ಮುಖ್ಯ ಅತಿಥಿಯಾಗಿ ಭಾಷಣ ಮಾಡುತ್ತಿರಲಿಲ್ಲ.

ವಾಸುದೇವ ನಾಯ್ಕರು ಯಾವುದೇ ‘ಇಸಂ’ಗಳ ಪ್ರತಿಪಾದಕರಲ್ಲ. ತಮ್ಮ ಜನ ಓದಬೇಕು, ವಿದ್ಯಾವಂತರಾಗಬೇಕು, ಶುದ್ಧಜೀವನ ನಡೆಸಬೇಕು, ಉಳಿತಾಯದ ಪ್ರವೃತ್ತಿ ಬೆಳೆಸಿಕೊಳ್ಳಬೇಕು, ಇನ್ನೊಬ್ಬರ ಅನುಕರಣೆಗೆ ಹೋಗಬಾರದು, ತಮ್ಮ ‘ಸ್ವ’ವನ್ನು ಗುರುತಿಸಿಕೊಳ್ಳಬೇಕು. ತಮ್ಮ ಸಂಸ್ಕೃತಿ, ಆಚಾರ ವಿಚಾರ ಎಲ್ಲವೂ

ಶ್ರೇಷ್ಠವೆಂದೂ 'ಗತ'ವೇ ಶ್ರೇಷ್ಠ ಎಂಬ ಹಳಹಳಿಕೆ ಸರಿಯಲ್ಲವೆಂದೂ ಹೇಳುತ್ತಿದ್ದರು. ದೇವಾಲಯದ ಜೀರ್ಣೋದ್ಧಾರ, ನವೀಕರಣ, ಬ್ರಾಹ್ಮಣೀಕರಣದ ಒಪ್ಪಿತ ಬೇಕಿಲ್ಲ ಎನ್ನುತ್ತಿದ್ದುದನ್ನು ನಾನು ಕೇಳಿದ್ದೇನೆ. ಎಲ್ಲಕ್ಕಿಂತ ಮುಖ್ಯ ನಮ್ಮ ಕೇರಿಯಲ್ಲಿ ಸುಸಜ್ಜಿತ ಶಾಲೆಗಳಾಗಬೇಕು, 'ನಮ್ಮ ಮಕ್ಕಳು ನಿಮ್ಮಂತೆಯೇ ಆಗಬೇಡವೇ?" ಎನ್ನುವ ಪ್ರಶ್ನೆಯನ್ನು ಹಾಕಿ ಕೊಳ್ಳಬೇಕು. ಮಕ್ಕಳ ಶಿಕ್ಷಣ, ಓದುವವರಿಗೆ ಪ್ರೋತ್ಸಾಹ ನೀಡುವ ಸಂದರ್ಭದಲ್ಲಿ ಚಂದಾ ಎತ್ತೋಣ, ನಾನೂ ಬರುತ್ತೇನೆ ಎನ್ನುವ ಧೋರಣೆ ಅವರದು.

ನಾನು ಕಂಡ ಸುಮಾರು ಐವತ್ತು ವರ್ಷ ಹಿಂದಿನ ಖಾರ್ವಿಕೇರಿಯ ಖಾರ್ವಿ ಬಂಧುಗಳಲ್ಲಿ ಒಂದು ಬಗೆಯ 'ಸ್ವಹೀನತಾ' ಭಾವನೆ ಇದ್ದಿತ್ತು. ಇದ್ದುದೆಲ್ಲವ ಬಿಟ್ಟು ಇಲ್ಲದರೆಡೆಗೆ ಸಾಗುವ ಅಪಾಯಕಾರಿ ದಾರಿಯಲ್ಲಿ ಸಾಗುವ ಪ್ರವೃತ್ತಿ ಕಾಣಿಸುತ್ತಿತ್ತು. ಇದನ್ನು ಬದಲಾಯಿಸುವಲ್ಲಿ ವಾಸುದೇವ ನಾಯ್ಕರು 'ಗುಪ್ತ ಕ್ರಾಂತಿ'ಯನ್ನು ನಡೆಸಿದರು. ಹೆಚ್ಚು ಮಾತನಾಡದೆ ತಮ್ಮ ನಡವಳಿಕೆಯಿಂದಲೇ ತನ್ನವರನ್ನು ತಿದ್ದಿದರು. ಸಾಂಸ್ಕೃತಿಕ ಪ್ರೀತಿಯನ್ನು ಉಳಿಸಿಕೊಳ್ಳುತ್ತಲೇ ಆರ್ಥಿಕ, ಸಾಮಾಜಿಕ ಉನ್ನತಿಯ ಕಡೆಗೆ ಸಾಗುವ ಬಗೆಗೆ ಚಿಂತಿಸುತ್ತಿದ್ದರು.

ಖಾರ್ವಿ ಸಮುದಾಯವನ್ನು ಬೇರೆ ಬೇರೆ ನೆಲೆಗಳಲ್ಲಿ ನಾನು ಮತ್ತು ನನ್ನಾಕೆ ಡಾ. ಗಾಯತ್ರಿ ನಾವಡ ನಡೆಸಿದ ಖಾರ್ವಿ ಅಧ್ಯಯನಗಳಿಗೆ ವಾಸುದೇವ ನಾಯ್ಕ ಅವರೇ ಮಾರ್ಗದರ್ಶಕರು. ಮುಂದೆ ನೆರವಾದವರು ಸುಬ್ರಾಯ ಸಾರಂಗ, ಕೆ. ಗಣಪತಿ ನಾಯ್ಕ, ಬಸವ ಖಾರ್ವಿ ಮೊದಲಾದವರು. ಹೀಗೆ ನನ್ನ ಸಮುದಾಯ ಅಧ್ಯಯನ ಆರಂಭವಾದುದು ಖಾರ್ವಿಗಳ ಮುಖಾಂತರ- ಅದು ವಾಸುದೇವ ನಾಯ್ಕರ ಮಾರ್ಗದರ್ಶನದಲ್ಲಿ.

ಕೆ. ವಾಸುದೇವ ನಾಯ್ಕರು ಕುಂದಾಪುರ ಕೋರ್ಟಿನಲ್ಲಿ ಸಣ್ಣ ಹುದ್ದೆಯಲ್ಲಿದ್ದರು. ಅವರ ಸಹೋದ್ಯೋಗಿಗಳು ಹೇಳುವಂತೆ ಅವರಾಯಿತು, ಅವರ ಕೆಲಸವಾಯಿತು. ಅವರಿವರ ಜತೆ ಮಾತುಕತೆ, ಕ್ಯಾಂಟೀನ್ ಹರಟೆ ಅವರಿಗೆ ಇರಲಿಲ್ಲ. ಸಣ್ಣ ಆದಾಯದಲ್ಲಿ ತಮ್ಮ ಏಳು ಮಕ್ಕಳಿಗೂ ಒಳ್ಳೆಯ ಶಿಕ್ಷಣ ಕೊಡಿಸಿದರು. ಎಲ್ಲರೂ ತಮ್ಮ ಕಾಲುಗಳ ಮೇಲೆ ನಿಲ್ಲುವಂತೆ ಏರ್ಪಾಟು ಮಾಡಿದರು. ನಿವೃತ್ತರಾದ ನಂತರವೂ ತಮ್ಮ ಹಳೆಗಾಲದ ಮನೆಯಲ್ಲೇ ಇರುತ್ತಿದ್ದರು. ಗೋಡೆಗಳಿಗೆ ಸುಣ್ಣ ಬಣ್ಣ ಹೊಸದಾಯಿತೇ ಹೊರತು ಮನೆಯ ವಿನ್ಯಾಸ ಬದಲಾಗಲಿಲ್ಲ. ಅವರು ಆರಕ್ಕೆ ಏರದ ಮೂರಕ್ಕೆ ಇಳಿಯದ ಸಂತೃಪ್ತ ಜೀವಿ. ಅವರ ಬಟ್ಟೆಬರೆ, ವೇಷಭೂಷಣ, ನಡೆನುಡಿ ಎಲ್ಲವೂ ಸರಳ-ಸ್ವಚ್ಛ. ತಿಳಿ ನೀರಿನಂಥ ಪಾರದರ್ಶಕ ವ್ಯಕ್ತಿತ್ವ ಅವರದು.

'ತಾಯಿಯಂತೆ ಮಗಳು, ನೂಲಿನಂತೆ ಸೀರೆ' ಎಂಬ ಮಾತಿನಂತೆ ವಾಸುದೇವ ನಾಯ್ಕರ ಮಕ್ಕಳು ಅಪ್ಪನಂತೆ ಖಡಕ್ ಮಂದಿ. ಅವರ ಎರಡನೆಯ ಮಗ ವಿಶ್ವ

ಕುಂದಾಪುರ ತರಗತಿಯಲ್ಲಿ ನನ್ನ ನೇರ ವಿದ್ಯಾರ್ಥಿ ಅಲ್ಲದಿದ್ದರೂ ಅವರು ನನ್ನನ್ನು ಗುರು ಎಂದು ಪರಿಗಣಿಸಿದ್ದಾರೆ. ಎಸ್‌ಎಫ್‌ಐ ಸಂಘಟನೆಯ ನೇತಾರನಾಗಿದ್ದರು. ಸ್ಥಳೀಯ ಅಥವಾ ರಾಷ್ಟ್ರ ಮಟ್ಟದ ಸಮಸ್ಯೆಗಳು, ತಕರಾರುಗಳು ಎದುರಾದಾಗ ಕಾಲೇಜ್‌ನೊಳಗೆ ಹಾಗೂ ಹೊರಗೆ ನಗರದಲ್ಲಿ ಸಾತ್ವಿಕ ಹೋರಾಟಗಳನ್ನು ಸಂಘಟಿಸುತ್ತಿದ್ದರು. ಇದರಿಂದಾಗಿ ಅವರು ಕೆಲವೊಮ್ಮೆ ಕಾಲೇಜ್ ಪ್ರಿನ್ಸಿಪಾಲರ ಕೆಂಗಣ್ಣಿಗೆ ಗುರಿಯಾದದ್ದೂ ಉಂಟು. ನಾನು ಕೆಲವೊಮ್ಮೆ ಅವರನ್ನು ಬಳಿಗೆ ಕರೆದು 'ಪ್ರತಿಭಟನೆ ನಡೆಸುವಾಗ ಅದು ಉಗ್ರರೂಪಕ್ಕೆ ತಿರುಗದಂತೆ ಎಚ್ಚರದಿಂದಿರಿ, ಬೀದಿ ಹೋರಾಟ ಬೇಡ' ಎಂದು ಎಚ್ಚರಿಸಿದ್ದೆ. ಅಂದಿನ ಅವರ ಸಣಕಲು ದೇಹದಲ್ಲಿ ಅದ್ಭುತವಾದ ಹೋರಾಟದ ಕಸುವು ಇದ್ದಿತ್ತು . ಇದಕ್ಕೆಲ್ಲ ಪರೋಕ್ಷವಾಗಿ ತಂದೆ ವಾಸುದೇವ ನಾಯ್ಕರ ಒಳಪ್ರೇರಣೆ ಇತ್ತೆಂದು ನಾನು ಭಾವಿಸುತ್ತೇನೆ.

ನಾನು 1993ರಲ್ಲಿ ಹಂಪಿ ವಿಶ್ವ ವಿದ್ಯಾಲಯಕ್ಕೆ ಹೋಗುವ ಮುನ್ನ ವಾಸುದೇವ ನಾಯ್ಕರನ್ನು ಕಂಡು ಮಾತನಾಡಿಸಿ ಹೋಗಿದ್ದೆ. ಆಗಲೇ ವಯೋಸಹಜ ಅನಾರೋಗ್ಯದಿಂದ ಬಸವಳಿದಿದ್ದರು. ಕೆಲವು ವರ್ಷಗಳ ನಂತರ ಅವರು ಅಗಲಿದರು ಎಂದು ಕೇಳಿದೆ.

ಅವರ ತುಟಿಯಂಚಿನ ಮುಗ್ಧ ಸ್ನಿಗ್ಧ ಮಂದಹಾಸ ನನ್ನ ಮನಸ್ಸಿನಿಂದ ಎಂದೂ ಮಾಸದು. ಅದಕ್ಕೆಂದೇ ನಾನು ಹೇಳಿದ್ದು: "ಖಾರ್ವಿಗಳ ನಡುವಿನ ಒಬ್ಬ ಸಂತ" ವಾಸುದೇವ ನಾಯ್ಕರು ಎಂದು.

********************

# ಕಡಲ ಕುವರ ಶ್ರೀ ಕೆ. ವಾಸುದೇವ

✍ – ಡಾ. ನಾ. ಡಿಸೋಜ
ನೆಹರು ನಗರ
ಸಾಗರ – 577 401

ನನಗೆ ಕಡಲು ಅಂದರೆ ಅದೊಂದು ರೀತಿಯ ಹುಚ್ಚು. ಅದರ ವಿಸ್ತಾರ, ಸಾವಿರ ಅಲೆಗಳನ್ನ ಉರುಳಿಸುವ ಅದರ ಅಚ್ಚರಿ, ನಿರಂತರವಾಗಿ ಅದು ಮಾಡುವ ಗರ್ಜನೆ, ಅದರಲ್ಲಿ ಅಡಗಿರುವ ಲಕ್ಷಲಕ್ಷ ಜಲಚರಗಳು, ಇನ್ನೂ ಮುಖ್ಯವಾಗಿ ಐದಡಿಯ ಮನುಷ್ಯ ನಿರಂತರವಾಗಿ ಕಡಲಿನ ಜೊತೆಯಲ್ಲಿ ಇರಿಸಿ ಕೊಂಡಿರುವ ಸಂಬಂಧ, ಅವನಿಗೂ ಕಡಲಿಗೂ ಇರುವ ಸ್ನೇಹ, ಒಡನಾಟ, ಇತ್ಯಾದಿಗಳನ್ನು ಹತ್ತಿರದಿಂದ ನೋಡಿ ಅಚ್ಚರಿ ಪಟ್ಟವನು ನಾನು. ಮುರುಡೇಶ್ವರದ ನನ್ನ ಅಜ್ಜನ ಮನೆ ಕಡಲ ತಡಿಯಲ್ಲಿ ಇದ್ದುದು ಒಂದು ಕಾರಣವಾದರೆ ಈ ಅಜ್ಜನ ಮನೆಯ ಜಗಲಿಯ ಮೇಲೆ ಕುಳಿತು ಕಡಲಿನ, ಕಡಲ ಮಕ್ಕಳ ಬದುಕನ್ನ ನೋಡುತ್ತಿದ್ದೆ ನಾನು. ಕಡಲ ಮಕ್ಕಳಾದ ಖಾರ್ವಿ, ಮೊಗೇರ, ಹರಿಕಂತಾರ, ಗಾಬಿತ್ ಮೊದಲಾದವರ ಬದುಕಿನಿಂದ ಸ್ಫೂರ್ತಿ ಪಡೆದವನು ನಾನು. ಮುರುಡೇಶ್ವರದ ಕಡಲ ತಡಿಗೆ ಹೋಗಿ ನಿಂತು ಈ ಎಲ್ಲ ಕಡಲ ಮಕ್ಕಳ ನಿತ್ಯದ ಚಟುವಟಿಕೆಗಳನ್ನ ಕಣ್ ತುಂಬಿಸಿ ಕೊಳ್ಳುತ್ತಿದ್ದವ. ಅವರು ಮೀನು ಹಿಡಿಯುವುದು, ಒಣಗಿಸುವುದು, ಇತ್ಯಾದಿ ಚಟುವಟಿಕೆಗಳು ನನಗೆ ಪ್ರಿಯವಾಗಿದ್ದವು.

ನನ್ನ ಈ ಹವ್ಯಾಸ ಎಲ್ಲೋ ಒಂದು ಕಡೆ ನನಗೆ ಬರವಣಿಗೆಗೆ ಪ್ರೇರೇಪಿಸಿತು. ಕಣ್ಣಿಗೆ ಬಿದ್ದುದನ್ನ ಕೂಲಂಕುಶವಾಗಿ ನೋಡುವ ನಾನು ಈ ಕಡಲ ಮಕ್ಕಳ ಬದುಕನ್ನ ಕೂಡ ಗಮನಿಸ ತೊಡಗಿದೆ. ಹೀಗೆ ಕಡಲ ಮಕ್ಕಳ ಬಗ್ಗೆ ವಿಚಾರ ಮಾಡ ತೊಡಗಿದಾಗಲೇ "ತರಂಗ" ಪತ್ರಿಕೆಯ ಸಂಪಾದಕರು, ನನ್ನ ಸ್ನೇಹಿತರು ಆದ ದಿ. ಶ್ರೀ ಸಂತೋಷ ಕುಮಾರ ಗುಲ್ವಾಡಿಯವರು ಈ ಕಡಲ ಮಕ್ಕಳ ಕುರಿತು ಒಂದು ಕಾದಂಬರಿ ಬರೆದು ಕೊಡಲು ಕೇಳಿ ಕೊಂಡರು. ನಾನು ಸಾಮಾನ್ಯವಾಗಿ ಕತೆ ಕಾದಂಬರಿಗಳನ್ನ ಬರೆದು ಇಡುವುದಿಲ್ಲ. ಯಾರಾದರೂ ಪ್ರಕಟಿಸುತ್ತೇನೆ ಅಂದರೆ ಕೂಡಲೇ ಒಂದು ಕತೆಯನ್ನೋ ಕಾದಂಬರಿಯನ್ನೋ ಬರೆಯುವವ ನಾನು. ಅಂತೆಯೇ ಕಡಲ ಮಕ್ಕಳ ಕುರಿತು ಒಂದು ಕಾದಂಬರಿ ಬರೆಯ ಹೊರಟೆ. ಈ ಬರವಣಿಗೆಗೆ ತೊಡಗಿದಾಗ ನನಗೆ ನನ್ನಲ್ಲಿ ಕಡಲ ಮಕ್ಕಳ ಬಗ್ಗೆ ಇರುವ ಮಾಹಿತಿಯ ಕೊರತೆಯ ಅರಿವಾಯಿತು. ಆಗ ನಾನು ಇಂತಹ ಮಾಹಿತಿಯನ್ನು ನೀಡಬಲ್ಲ ಓರ್ವ ವ್ಯಕ್ತಿಯನ್ನ ಹುಡುಕಿ ಕೊಂಡು ಹೊರಟೆ.

ಹೀಗೆ ಹೊರಟಾಗ ನನಗೆ ಮೊದಲು ಸಿಕ್ಕವರು ಕುಂದಾಪುರದ ಶ್ರೀ ವಾಸುದೇವ ಖಾರ್ವಿ.

ನನ್ನ ನೆನಪು ಸರಿಯಾಗಿದೆ ಅನ್ನುವುದಾದರೆ ವಾಸುದೇವ ಖಾರ್ವಿ ನ್ಯಾಯಾಂಗ ಇಲಾಖೆಯಲ್ಲಿ ಕೆಲಸ ಮಾಡುತ್ತಿದ್ದವರು ಅದೇ ನಿವೃತ್ತರಾಗಿದ್ದರು. ತುಂಬಾ ಸರಳ, ಸ್ನೇಹಮಯಿ. ಒಂದು ಬಿಳಿ ಶರಟು, ಒಂದು ಅಡ್ಡ ಪಂಚೆ. ಸದಾ ಮುಗುಳು ನಗೆ. ತಮ್ಮ ಜನಾಂಗದ ಬಗ್ಗೆ ಅಪಾರ ಗೌರವ. ಜನಾಂಗದ ಎಲ್ಲರ ಪ್ರೀತಿ ಗೌರವವನ್ನು ಗಳಿಸಿ ಕೊಂಡಿದ್ದರು. ಖಾರ್ವಿ ಜನರಿಗೆ ವಾಸುದೇವ ಅಂದರೆ ಅಪಾರ ಪ್ರೀತಿ. ಅವರ ಈ ಸ್ಥಾನಮಾನಗಳನ್ನ ಕಂಡಾಗ ನಾನು ನನ್ನ ಕೆಲಸಕ್ಕೆ ಸೂಕ್ತ ವ್ಯಕ್ತಿಯನ್ನೇ ಆಯ್ಕೆ ಮಾಡಿ ಕೊಂಡೆ ಅನಿಸಿತು.

ಆ ಸಂದರ್ಭದಲ್ಲಿ ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಒಂದು ಘಟನೆ ನಡೆದಿತ್ತು. ಮಂಗಳೂರಿನ ನನ್ನ ಆತ್ಮೀಯರಾದ ಓರ್ವ ಲೇಖಕರು ಮೀನುಗಾರರ ಬಗ್ಗೆ ಒಂದು ಕಾದಂಬರಿ ಬರೆದು, ಅದು ಪತ್ರಿಕೆಗಳಲ್ಲಿ ಧಾರಾವಾಹಿಯಾಗಿ ಪ್ರಕಟವಾದ ಒಂದೆರಡು ದಿನಗಳಲ್ಲಿ, ಮೀನುಗಾರರ ಬಗ್ಗೆ ಬರೆದ ಒಂದೆರಡು ಮಾತುಗಳು ಸಂಬಂಧ ಪಟ್ಟ ಜನಸಮುದಾಯವನ್ನು ಕೆರಳಿಸಿ ಲೇಖಕ ಅಜ್ಞಾತ ವಾಸದಲ್ಲಿ ತನ್ನನ್ನ ಮುಚ್ಚರಿಸಿ ಕೊಂಡ ಒಂದು ಘಟನೆ ನಡೆದಿತ್ತು. ಪತ್ರಿಕೆ ಧಾರಾವಾಹಿ ಕಾದಂಬರಿಯನ್ನ ಅಷ್ಟಕ್ಕೇ ನಿಲ್ಲಿಸಿತ್ತು.

ನಾನು ನನ್ನ ಉದ್ದೇಶವನ್ನು ಶ್ರೀ ವಾಸುದೇವ ಅವರ ಮುಂದೆ ಪ್ರಸ್ತಾಪಿಸಿದಾಗ ಅವರು ಈ ಮೇಲಿನ ಘಟನೆಯನ್ನ ಉಲ್ಲೇಖಿಸಿದರು ಹಾಗೂ "ನೀವು ಬರೆಯಲಿರುವ ಕಾದಂಬರಿ ನನ್ನ ಜನಾಂಗದ ಮೇಲೆ ಯಾವುದೇ ಕಳಂಕವನ್ನ ಹಚ್ಚುವಂತೆ ಇರಬಾರದು, ನನ್ನ ಸಮುದಾಯ ಅಭಿಮಾನ, ಹೆಮ್ಮೆಯಿಂದ ಬದುಕಿರುವಂತಹದು. ವಿನಾಕಾರಣ ಅದನ್ನ ಬೀದಿಗೆ ತರುವ ಕೆಲಸ ಆಗಬಾರದು" ಎಂದರು. ನಾನು ಅವರ ಮಾತು ಕೇಳಿ ರೋಮಾಂಚಿತನಾದೆ. ಅವರು ತಮ್ಮ ಸಮುದಾಯದ ಮೇಲೆ ಇರಿಸಿ ಕೊಂಡ ಅಭಿಮಾನ, ಜೊತೆಗೆ ಅವರ ಸಮುದಾಯದ ನಿಷ್ಠೆ ಗೌರವವನ್ನ ನಾನು ಕಾಪಾಡುತ್ತೇನೆ ಎಂದು ಮಾತು ಕೊಟ್ಟೆ.

ನಂತರ ವಾಸುದೇವ ನನಗೆ ಹತ್ತಿರವಾದರು. ಅವರು ಖಾರ್ವಿ ಜನಾಂಗದ ಎಲ್ಲ ಪದ್ಧತಿ, ಆಚರಣೆ, ಅವರ ಬದುಕು, ಬವಣೆ, ಸಂಸ್ಕೃತಿ, ಜೀವನ ವಿಧಾನ, ನಂಬಿಕೆ, ಅವರು ಬಳಸುವ ಬಲೆ ಇತ್ಯಾದಿಗಳ ಹೆಸರು ವಿವರ, ಮೀನುಗಳ ಪರಿಚಯ, ಅವುಗಳಲ್ಲಿ ಇರುವ ವಿವಿಧ ಜಾತಿ, ಹೀಗೆ ಖಾರ್ವಿ ಸಮಾಜದ ಎಲ್ಲ ವಿವರಗಳನ್ನು ನನಗೆ ನೀಡಿದರು.

ಇಷ್ಟು ಸಾಲದೆಂದು ನನ್ನನ್ನು ಕುಂದಾಪುರ, ಗಂಗೊಳ್ಳಿ, ಭಟ್ಕಳ, ಮುರುಡೇಶ್ವರ, ಉಳ್ಳಾಲ, ಶಿರಾಲಿ, ಅಳವೆದಂಡೆ, ಬೇಲಿಕೇರಿ, ಪಡುಬಿದ್ರೆಯ ಅಸಂಖ್ಯಾತ ಮೀನುಗಾರರ ಕೇರಿಗಳಿಗೆ ನನ್ನನ್ನ ಕರೆದೊಯ್ದು ಅಲ್ಲಿಯ ಜನರ ಪರಿಚಯ ಮಾಡಿ ಕೊಟ್ಟರು. ಆ ಕೇರಿಗಳಲ್ಲಿ ಜನಮನ್ನಣೆ ಗಳಿಸಿದವರನ್ನು, ಪ್ರಖ್ಯಾತ ಮೀನುಗಾರರನ್ನು,

ಅವರ ಸಾಹಸ ಗಾಥಗಳನ್ನು, ಮೀನು ಮಾರುವ ಮಹಿಳೆಯರನ್ನು ನನಗೆ ಪರಿಚಯ ಮಾಡಿ ಕೊಟ್ಟರು. ನಾನು ಅವರೆಲ್ಲರ ಮನೆಗಳಲ್ಲಿ ಊಟ ಮಾಡಿದೆ, ಚಾ ಕುಡಿದೆ, ಎಳನೀರು ಕುಡಿದೆ, ಇದೆಲ್ಲದಕ್ಕೂ ಕಾರಣರಾದವರು ಶ್ರೀ ವಾಸುದೇವ. ಅವರ ಮೇಲೆ ಖಾರ್ವಿ ಜನಾಂಗದವರಿಗೆ ಇದ್ದ ಅಭಿಮಾನ, ಪ್ರೀತಿ. ಇದೇ ಸಮಯದಲ್ಲಿ ಭಟ್ಕಳದಲ್ಲಿ ನಡೆದ ಒಂದು ಖಾರ್ವಿ ಸಮ್ಮೇಳನದಲ್ಲಿ ನಾನು ಆ ಜನಾಂಗದ ಎಲ್ಲರ ಜೊತೆಯಲ್ಲಿ ಓರ್ವನಾಗಿ ಭಾಗವಹಿಸಿದೆ ಕೂಡ.

ಶ್ರೀ ವಾಸುದೇವರ ಮೂಲಕ ಈ ಹಿಂದಿನ ಮೀನುಗಾರಿಕೆ, ಇಂದಿನ ಯಾಂತ್ರಿಕ ಮೀನುಗಾರಿಕೆ, ಇವುಗಳ ಲಾಭ ನಷ್ಟ, ಹಿಂದೆ ಜನ ಪಡುತ್ತಿದ್ದ ಕಷ್ಟ, ಇಂದು ಕೆಲ ವಿಷಯಗಳಲ್ಲಿ ಅದು ಸುಲಭವಾಗಿರುವುದು, ಕೆಲ ಪದ್ಧತಿಗಳಲ್ಲಿ ಆಗಿರುವ ಬದಲಾವಣೆ, ಕಡಲು ಕೂಡ ತನ್ನ ಸ್ವಭಾವ ಬದಲಿಸಿ ಕೊಂಡಿರುವುದು, ಇಂದು ಕಡಲು ತನ್ನ ಮೇರೆ ಮೀರಿ ಊರು ಕೇರಿಗಳನ್ನ ನುಂಗುತ್ತಿರುವುದು, ಸರಕಾರದ ಅಸಹಜ ಕ್ರಮಗಳಿಂದಾಗಿ ಕಡಲಿಗೆ ಸಿಟ್ಟು ಬಂದಿರುವುದು ಇತ್ಯಾದಿಯಾಗಿ ಹಲವು ವಿಷಯಗಳನ್ನ ವಾಸುದೇವರಿಂದ ಅವರು ಭೇಟ್ಟಿ ಮಾಡಿಸಿದ ಮೀನುಗಾರರಿಂದ ನಾನು ಸಂಗ್ರಹಿಸಿದೆ.

ಕಡಲಲ್ಲಿ ಹಿಡಿದ ಮೀನನ್ನು ಮಾರುವಾಗ ಮೀನುಗಾರರಿಗೆ ಆಗುವ ಅನ್ಯಾಯದ ಬಗ್ಗೆಯೂ ಅವರು ತಿಳಿಸಿದರು. ನಿಧಾನವಾಗಿ ಮೀನುಗಾರರ ಬಗ್ಗೆ ಒಂದು ಸ್ಪಷ್ಟ ಚಿತ್ರ ನನ್ನ ಮನಸ್ಸಿನಲ್ಲಿ ಮೂಡ ತೊಡಗಿತು. ಮೀನುಗಾರರ ಅದೂ ಖಾರ್ವಿ ಜನಾಂಗದ ಮೇಲೆ ನನಗಿದ್ದ ಪ್ರೀತಿ ಗೌರವ ಮತ್ತೂ ಅಧಿಕವಾಯಿತು.

ಹೀಗೆ ಓರ್ವ ಕನ್ನಡದ ಕಾದಂಬರಿಕಾರನನ್ನು ಖಾರ್ವಿ ಜನಾಂಗ ತನ್ನವನು ಅನ್ನುವ ರೀತಿಯಲ್ಲಿ ಕಂಡಿತು, ಸ್ವಾಗತಿಸಿತು, ಪ್ರೀತಿಸಿತು ಅಂದರೆ ಅದಕ್ಕೆ ಕಾರಣ ಕೆ. ವಾಸುದೇವ ಖಾರ್ವಿ ಕುಂದಾಪುರ. ಅವರ ಸಹಜ ಸರಳ ವ್ಯಕ್ತಿತ್ವ, ಆ ಜನಾಂಗದವರು ಅವರ ಮೇಲೆ ಇರಿಸಿ ಕೊಂಡ ಗೌರವ. ಆ ಜನಾಂಗದ ಮೇಲೆ ವಾಸುದೇವರಿಗೆ ಇದ್ದ ಪ್ರೀತಿ.

ವಿಶಾಲವೂ ವಿಸ್ತಾರವೂ ಆದ ಕಡಲಿಗೆ ಹೋದ ನಾನು ಒಂದು ಬೊಗಸೆ ನೀರನ್ನ ತಂದೆ. ನಾನು ಈ ಪ್ರವಾಸದ ನೆರವಿನಿಂದ ಒಂದು ಕಾದಂಬರಿ ಬರೆದೆ. ಅದು "ಕಡಲು ಕಾಯುವುದಿಲ್ಲ".

ಕಾಯುವುದಿಲ್ಲ ಅನ್ನುವ ಶಬ್ದಕ್ಕೆ ಹಲವು ಅರ್ಥಗಳಿವೆ. ಕಡಲು ನಮ್ಮನ್ನ ರಕ್ಷಿಸುವುದಿಲ್ಲ ಎಂದು ಒಂದು ಅರ್ಥ. ನಮಗಾಗಿ ಅದು ದಾರಿ ನೋಡುವುದಿಲ್ಲ ಅನ್ನುವುದು ಇನ್ನೊಂದು ಅರ್ಥ. ಅದು ಅಲ್ಲಿದೆ. ಅದರ ಪ್ರಯೋಜನವನ್ನ ನಮಗೆ ತೋರಿದಂತೆ ನಾವು ಮಾಡಿಕೊಳ್ಳಬೇಕು ಎಂಬ ಅರ್ಥವನ್ನೂ ಅದು ನೀಡುತ್ತದೆ, ಕಾದಂಬರಿಯಲ್ಲಿ ನಾನು ಎಲ್ಲಿಯೂ ಖಾರ್ವಿ ಶಬ್ದವನ್ನ ಬಳಸಲಿಲ್ಲ. ಯಾವುದೇ ಜನಾಂಗಕ್ಕೆ ಅವಮಾನ ಮಾಡ ಬಾರದು ಅನ್ನುವುದು ನನ್ನ ಧೋರಣೆ.

ಖಾರ್ವಿಗಳು ನಾನು ಹತ್ತಿರದಿಂದ ನೋಡಿದಂತೆ ಸಾಹಸಿಗಳು, ಬದುಕಿನಲ್ಲಿ ಶ್ರದ್ಧೆ ಆಸಕ್ತಿ ಇರುವವರು, ಕಡಲ ಆರಾಧಕರು, ನಮ್ಮೆಲ್ಲರ ಬೇಡಿಕೆಗಳನ್ನ ತಣಿಸಲು ತಮ್ಮ ಬದುಕನ್ನ ಅಪಾಯಕ್ಕೆ ಒಡ್ಡುವವರು, ಜಾನಪದ ಆಚರಣೆ, ಕತೆ, ಹಾಡುಗಳನ್ನ ಹೇಳಿ ತಮ್ಮ ಬದುಕಿಗೆ ಒಂದು ಸೊಗಸನ್ನ ತಂದು ಕೊಂಡಿರುವವರು, ಅವರ ಒಡನಾಟದಲ್ಲಿ ನಾನು ಹಲವು ಬಾರಿ ಅವರ ಬದುಕಿಗೆ ತಲೆದೂಗಿದ್ದೇನೆ, ಮೆಚ್ಚಿ ಕೊಂಡಿದ್ದೇನೆ.

"ಕಡಲು ಕಾಯುವುದಿಲ್ಲ" ಹದಿನೆಂಟು ವಾರ "ತರಂಗ" ಪತ್ರಿಕೆಯಲ್ಲಿ ಧಾರಾವಾಹಿಯಾಗಿ ಪ್ರಕಟವಾಯಿತು. ಓದುಗರ ಮೆಚ್ಚುಗೆ ಪಡೆಯಿತು. ಕರ್ನಾಟಕದ ಒಂದು ಕಡೆ ಪಶ್ಚಿಮದಲ್ಲಿ ಒಂದು ಕಡಲನ್ನ ಹೊಂದಿದ್ದರೂ ಮೀನುಗಾರರ ಬಗ್ಗೆ ನಮ್ಮಲ್ಲಿ ಕತೆ ಕಾದಂಬರಿಗಳು ಕಡಿಮೆ. ಈ ಕೊರತೆ ನೀಗಿತು ಎಂದು ಓದುಗರು ಅಭಿಪ್ರಾಯ ಪಟ್ಟರು. ನಂತರ 1994ರಲ್ಲಿ ಸದರಿ ಕಾದಂಬರಿಯನ್ನು ಪುಸ್ತಕ ರೂಪದಲ್ಲಿ ಮೈಸೂರಿನ 'ಗೀತಾ ಬುಕ್ ಹೌಸ್'ನವರು ಪ್ರಕಟಿಸಿದರು.

ನಂತರದ ದಿನಗಳಲ್ಲಿ ಒಂದಿಬ್ಬರು ಈ ಕಾದಂಬರಿಯನ್ನ ಚಲನ ಚಿತ್ರ ಮಾಡುವ ಮಾತನ್ನ ಆಡಿ ಮುಂದೆ ಬಂದರಾದರೂ ಈ ಕೆಲಸ ಏಕೋ ಆಗಲಿಲ್ಲ. ಅದು ಏನೇ ಇರಲಿ ನನ್ನ ಈ ಸಾಧನೆಗೆ ಶ್ರೀ ಕೆ. ವಾಸುದೇವ ಕಾರಣ ಅನ್ನುವ ಮಾತನ್ನು ಈ ಸಂದರ್ಭದಲ್ಲಿ ಹೇಳಲು ನನಗೆ ಹೆಮ್ಮೆ ಅನಿಸುತ್ತದೆ. ನಾನು ಬಹಳವಾಗಿ ಗೌರವಿಸುವ ಒಂದು ಜನಾಂಗದ ಜೊತೆಯಲ್ಲಿ ನಾನು ಕಳೆದ ಈ ದಿನಗಳ ನೆನಪು ಇಂದಿಗೂ ನನ್ನಲ್ಲಿ ಹಸಿರಾಗಿ ಉಳಿದಿದೆ.

********************

# ಆದರ್ಶ ವ್ಯಕ್ತಿ ನನ್ನಣ್ಣ ಕೆ. ವಾಸುದೇವ...

✍ **ಜಿ. ಗಣಪತಿ ಶಿಪ್ಪಾ**
ಮಾಜಿ ಪ್ರಧಾನ ಕಾರ್ಯದರ್ಶಿ
ಅಖಿಲ ಭಾರತ ಕೊಂಕಣಿ ಖಾರ್ವಿ ಮಹಾಜನ ಸಭಾ, ಗಂಗೊಳ್ಳಿ.

ಕೆ. ವಾಸುದೇವ ನಾಯ್ಕ್ ಇವರು ನನ್ನ ಅಣ್ಣ, ಅಂದರೆ ದೊಡ್ಡಮ್ಮನ ಮಗ, ಎಂಬ ಕಾರಣಕ್ಕಷ್ಟೆ ನನ್ನ ಗೌರವಕ್ಕೆ ಪಾತ್ರರಾದವರಲ್ಲ. ಬದಲಿಗೆ ಅವರ ಸಮಾಜಮುಖಿ ಚಿಂತನೆಗಳು ಹಾಗೂ ಕಾರ್ಯಗಳೇ ಅವರು ಸಮಾಜದಲ್ಲಿ ಅಂತೆಯೇ ನನ್ನಲ್ಲಿ ಗೌರವಾದರದ ಸ್ಥಾನಗಳನ್ನು ಹೊಂದಲು ಕಾರಣವಾಗಿವೆ.

ತಮ್ಮ ಶಿಕ್ಷಣ ಮುಗಿಯುತ್ತಲೇ ಕೆ.ವಿ. ನಾಯ್ಕ್ ಅವರು ಉಡುಪಿ ಜಿಲ್ಲೆಯ ಸಾಸ್ತಾನದ ಕೋಡಿ ಕನ್ಯಾಣದಲ್ಲಿ ಸರಕಾರಿ ಕಿರಿಯ ಪ್ರಾಥಮಿಕ ಶಾಲೆಯಲ್ಲಿ ಅಧ್ಯಾಪಕರಾಗಿ ಸೇರಿ ಕೆಲವು ವರ್ಷ ಕಾರ್ಯ ನಿರ್ವಹಿಸಿದರು. ಆನಂತರ ನ್ಯಾಯಾಂಗ ಇಲಾಖೆಯಲ್ಲಿ ಕೆಲಸಕ್ಕೆ ಸೇರಿ ಅದೇ ಇಲಾಖೆಯಲ್ಲಿ ವಯೋನಿವೃತ್ತಿ ಹೊಂದಿದರು.

ತನ್ನ ಜನಾಂಗವಾದ 'ಕೊಂಕಣಿ ಖಾರ್ವಿ' ಸಮಾಜದ ಅಭಿವೃದ್ಧಿಯ ಬಗ್ಗೆ ಸದಾ ಕನಸು ಕಾಣುತ್ತಿದ್ದ ಇವರು ಅದಕ್ಕಾಗಿ ಮಾಡಿದ ಚಿಂತನೆ-ಕಾರ್ಯಗಳು ಅನನ್ಯವಾದವುಗಳು. ಆ ಕಾಲದಲ್ಲಿ ಶಿಕ್ಷಣ ಪಡೆದು ಚಿಕ್ಕಪುಟ್ಟ ನೌಕರಿಯಲ್ಲಿದ್ದ ತನ್ನ ಜನಾಂಗದವರನ್ನು ಸಂಪರ್ಕಿಸಿ ತನ್ನಲ್ಲಿರುವ ಆಸೆಯನ್ನು ತೋಡಿಕೊಳ್ಳುತ್ತಿದ್ದರು.

ಹೀಗೆ ತನ್ನಲ್ಲಿರುವ ವಿಚಾರಗಳನ್ನು ಪರಸ್ಪರ ಹಂಚಿಕೊಂಡು ಸಮಾಜದ ಅಂದಿನ ಮುಖಂಡರಾದ ದಿವಂಗತರಾದ ಕೆ. ನರಸಿಂಹ ಆರ್ಕಾಟಿ ಸಾಸ್ತಾನ, ಗೋವಿಂದ ಪಟೇಲ ಕೋಡಿ ಬೆಂಗ್ರೆ, ಕೆ. ಸುಬ್ರಾಯ ಸಾರಂಗ ಕುಂದಾಪುರ, ಜಿ. ದೇವರಾಯ ಕಾನೋಜಿ ಗಂಗೊಳ್ಳಿ, ಕೆ. ಸಂಜೀವ ಖಾರ್ವಿ, ಭೈರು ಮಂಜುನಾಥ ಖಾರ್ವಿ ಭಟ್ಕಳ, ಜಿ. ಉಪೇಂದ್ರ ಆರ್ಕಾಟಿ ಗಂಗೊಳ್ಳಿ ಮತ್ತು ಜಿ. ಬಸವ ಪಂಡಿತ್ ಗಂಗೊಳ್ಳಿ ಹಾಗೂ ಇತರರನ್ನು ಕೂಡಿಕೊಂಡು 1958ರಲ್ಲಿ ಕೊಂಕಣಿ ಖಾರ್ವಿ ಮೀನುಗಾರರ ಸಂಘ (ರಿ) ಎಂಬ ಸಂಸ್ಥೆಯ ಸ್ಥಾಪನೆಗೆ ಕಾರಣಕರ್ತರಾದರು ಕೆ.ವಿ. ನಾಯ್ಕ್ ಇವರು. ಇದರ ರಿಜಿಸ್ಟರ್ಡ್ ಕಚೇರಿ ಗಂಗೊಳ್ಳಿಯಲ್ಲಿ ಹಾಗೂ ಪ್ರಧಾನ ಕಾರ್ಯಾಲಯ ಕುಂದಾಪುರದಲ್ಲಿ ಇತ್ತು. ಕೆಲವು ವರ್ಷಗಳ ನಂತರ ಸಂಘದ ಹೆಸರು 'ಅಖಿಲ ಕರ್ನಾಟಕ ಕೊಂಕಣಿ ಖಾರ್ವಿ ಮಹಾಜನ ಸಂಘ (ರಿ)' ಎಂದು ನಾಮಾಂತರವಾಯಿತು. ಪ್ರಸ್ತುತ ಅದು 'ಅಖಿಲ ಭಾರತ ಕೊಂಕಣಿ ಖಾರ್ವಿ ಮಹಾಜನ ಸಭಾ (ರಿ)' ಎಂದು ನಾಮಾಂಕಿತವಾಗಿ ಪ್ರಚಲಿತದಲ್ಲಿದೆ. ಈ ಸಂಘವು ಮಂಗಳೂರಿನಿಂದ ಕಾರವಾರದವರೆಗೆ ದಕ್ಷಿಣ ಕನ್ನಡ, ಉಡುಪಿ ಮತ್ತು ಉತ್ತರ ಕನ್ನಡ ಜಿಲ್ಲೆಗಳಲ್ಲಿ ಅಂದರೆ ಕರಾವಳಿ ಕರ್ನಾಟಕದಲ್ಲಿ ವಾಸಿಸುವ ಹಾಗೂ ದೇಶದ

ವಿವಿಧ ಭಾಗಗಳಲ್ಲೂ ನೆಲೆಸಿರುವ ಹಿಂದುಳಿದ ಖಾರ್ವಿ ಜನಾಂಗದ ಪ್ರಾತಿನಿಧಿಕ ಸಂಸ್ಥೆ ಎನಿಸಿಕೊಂಡಿದೆ.

ಕೊಂಕಣಿ ಖಾರ್ವಿ ಮೀನುಗಾರರ ಸಂಘ ಸ್ಥಾಪಿಸಿದ ಸುಮಾರು ಒಂದು ದಶಕದ ನಂತರ, ಸೋದರರಾರದ ಕೆ.ಜಿ. ನಾಯ್ಕ್ ಹಾಗೂ ಕೆ. ಕೇಶವ ಖಾರ್ವಿ ಜೊತೆಗೂಡಿ ಕುಂದಾಪುರದ ತನ್ನ ಸಮಾಜದ ಹಲವು ತರುಣರನ್ನು ಸೇರಿಸಿಕೊಂಡು ಪ್ರಮುಖವಾಗಿ ಸಮಾಜದ ನಡುವೆ ಶೈಕ್ಷಣಿಕ ಚಟುವಟಿಕೆಗಳ ಪ್ರೋತ್ಸಾಹಕ್ಕಾಗಿ 1969ರಲ್ಲಿ 'ವಿದ್ಯಾರಂಗ ಮಿತ್ರಮಂಡಳಿ' ಎಂಬ ಸಂಸ್ಥೆಯನ್ನು ಹುಟ್ಟು ಹಾಕಿದರು ಕೆ.ವಿ. ನಾಯ್ಕ್ ಇವರು. ವಿದ್ಯಾರಂಗದ ವಿದ್ಯಾನಿಧಿ ಯೋಜನೆಯು ಈ ಹಿಂದುಳಿದ ಸಮಾಜದ ಅಶಕ್ತ ವಿದ್ಯಾರ್ಥಿಗಳ ಶೈಕ್ಷಣಿಕ ಪ್ರಗತಿಗೆ ಸಹಾಯಹಸ್ತ ಚಾಚುತ್ತಾ ಬಂದಿರುವುದು ವಿಶೇಷ ಉಲ್ಲೇಖಾರ್ಹ ಸಂಗತಿ.

ಸಾಮಾಜಿಕವಾಗಿಯೂ ಶೈಕ್ಷಣಿಕವಾಗಿಯೂ ತೀರಾ ಹಿಂದುಳಿದ ಖಾರ್ವಿ ಸಮಾಜವು ಸರಕಾರದ ಸವಲತ್ತುಗಳಿಂದ ವಂಚಿತವಾಗಿರುವುದರಿಂದ ಈ ಸಮಾಜವನ್ನು ಪರಿಶಿಷ್ಟ ಜಾತಿಗೆ ಸೇರಿಸಬೇಕೆಂದು ಈ ಎರಡೂ ಸಂಸ್ಥೆಗಳ ಮೂಲಕ ತಮ್ಮ ಜೀವಮಾನ ಪರ್ಯಂತ ಸರಕಾರದ ಮೇಲೆ ಒತ್ತಡ ಹಾಕಲು ಕಾರ್ಯಕರ್ತರೊಂದಿಗೆ ಶ್ರಮಿಸಿದರು.

ಕೊಂಕಣಿ ಖಾರ್ವಿ ಜನಾಂಗದ ಕುರಿತ ಸ್ಟರಕ್ ಸಮಿತಿ ವರದಿಯನ್ನು ಸಂಗ್ರಹಿಸುವಲ್ಲಿ ಕೆ.ವಿ. ನಾಯ್ಕ್ ಸಫಲರಾಗಿದ್ದರು. ಸಮಾಜದ ಉನ್ನತಿಗಾಗಿನ ಅವರ ಕೆಲಸ ಕೇವಲ ಮೇಲ್ಪದರದ್ದಲ್ಲ, ಆಳವಾದ ಅಧ್ಯಯನವೂ ಅವರಲ್ಲಿ ಮೇಳೈಸಿತ್ತು ಎನ್ನುವುದಕ್ಕೆ ಅವರ ಈ ಕೆಲಸವೇ ಒಂದು ದೊಡ್ಡ ಸಾಕ್ಷಿಯಾಗಿದೆ.

ತಾನು ಸರಕಾರದ ಇಲಾಖೆಯಲ್ಲಿ ಉದ್ಯೋಗದಲ್ಲಿ ಇದ್ದುದರಿಂದ ಮೇಲಿನ ಎರಡೂ ಸಂಸ್ಥೆಗಳಲ್ಲಿ ಅವರು ಯಾವುದೇ ಅಧಿಕೃತ ಹುದ್ದೆಗಳನ್ನು ಸ್ವೀಕರಿಸಲಿಲ್ಲ. ತೆರೆಮರೆಯಲ್ಲಿ ಇದ್ದೇ ಮಾರ್ಗದರ್ಶನ ನೀಡಿ ಮುನ್ನಡೆಸಿದರು. ನಿವೃತ್ತಿಯ ನಂತರವೂ ಯಾವುದೇ ಪದಾಧಿಕಾರಿ ಆಗದೆ ಇತರರನ್ನು ಪ್ರೋತ್ಸಾಹಿಸಿದ್ದು ಅವರ 'ಸ್ಥಾನ ಮುಖ್ಯವಲ್ಲ, ಕೆಲಸ ಮುಖ್ಯ' ಎಂಬ ಸಿದ್ಧಾಂತಕ್ಕೆ ಪೂರಕವಾಗಿದೆ.

ಕೊಂಕಣಿ ಜಾನಪದ ಕ್ಷೇತ್ರದಲ್ಲಿನ ಇವರ ಅಪಾರ ಕಾರ್ಯಗಳನ್ನು ಗುರುತಿಸಿ ಕರ್ನಾಟಕ ಕೊಂಕಣಿ ಸಾಹಿತ್ಯ ಅಕಾಡೆಮಿ ಇವರಿಗೆ 2009ನೇ ಸಾಲಿನ 'ಜಾನಪದ' ಪ್ರಶಸ್ತಿ ನೀಡಿ ಗೌರವಿಸಿತು.

ಇವರ ಪ್ರೇರಣೆ ಮತ್ತು ಮಾರ್ಗದರ್ಶನದಲ್ಲಿ ಸದಾ ತೊಡಗಿಸಿಕೊಂಡಿರುವ ವಿದ್ಯಾರಂಗ ಮಿತ್ರಮಂಡಳಿ 1979ರಲ್ಲಿ ನಡೆಸಿದ ದಶಮಾನೋತ್ಸವ ಸಮಾರಂಭದ ವೇದಿಕೆಯಲ್ಲಿ ಅಖಿಲ ಕರ್ನಾಟಕ ಕೊಂಕಣಿ ಖಾರ್ವಿ ಮಹಾಜನ ಸಂಘವು 1979 ಡಿಸೆಂಬರ್ 16 ರಂದು ಖಾರ್ವಿ ಜನರ ಪ್ರಥಮ ಮಹಾ ಸಮಾವೇಶವನ್ನು ಆಯೋಜಿಸಿತ್ತು. ಟಿ.ಎ. ಪೈ ಮುಂತಾದ ರಾಜ್ಯ ಮತ್ತು ಕೇಂದ್ರದ ಸಚಿವರು ಈ

ಸಮಾವೇಶದಲ್ಲಿ ಭಾಗವಹಿಸಿದ್ದು ಕೆ.ವಿ. ನಾಯ್ಕ್‌ರ ಸಂಘಟನಾ ಸಾಮರ್ಥ್ಯಕ್ಕೆ ಹಿಡಿದ ಕನ್ನಡಿಯಾಗಿತ್ತು.

ಅಖಿಲ ಭಾರತ ಕೊಂಕಣಿ ಖಾರ್ವಿ ಮಹಾಜನ ಸಭಾ ಇದರ ಸಹ ಕಾರ್ಯದರ್ಶಿ ಮತ್ತು ಪ್ರಧಾನ ಕಾರ್ಯದರ್ಶಿಯಾಗಿ ಕಾರ್ಯ ನಿರ್ವಹಿಸಲು ನನಗೆ ಅವಕಾಶ ಸಿಕ್ಕಿದ್ದಲ್ಲಿ ಅದು ನನ್ನ ಪ್ರೀತಿಯ ಅಣ್ಣ ಕೆ. ವಾಸುದೇವ ನಾಯ್ಕ್‌ರ ಪ್ರೇರಣೆ ಮತ್ತು ಮಾರ್ಗದರ್ಶನವೇ ಕಾರಣ ಎಂದು ನಾನು ಹೆಮ್ಮೆಯಿಂದ ನೆನಪಿಸಿಕೊಳ್ಳಲು ಬಯಸುತ್ತೇನೆ. ಕೌಟುಂಬಿಕ ಸಂಬಂಧ ಮಾತ್ರವೇ ಅಲ್ಲದೆ ಸಾಮಾಜಿಕ ನೆಲೆಯಲ್ಲೂ ಇವರಂಥ ಚೇತನದ ಜೊತೆ ಒಡನಾಡಿದ್ದು ನನ್ನ ಭಾಗ್ಯ.

*****************

# ನನ್ನ ತಂದೆ

✍ ಕೆ.ವಿ. ವೀಣಾಕುಮಾರಿ

ಕೆ. ವಾಸುದೇವ ನಾಯ್ಕ್ ಎಂದರೆ ಕೊಂಕಣಿ ಖಾರ್ವಿ ಸಮಾಜದ ಓರ್ವ ಸಾಹಿತ್ಯ ರತ್ನ ಅಂತಲೇ ಗುರುತಿಸಲ್ಪಟ್ಟವರು. ಸಾಮಾಜಿಕ, ಧಾರ್ಮಿಕ, ಜನಪದಗಳಲ್ಲಿ ತಮ್ಮದೇ ಛಾಪನ್ನು ಮೂಡಿಸಿ ಕರ್ನಾಟಕ ಕರಾವಳಿಯ ಮಂಗಳೂರಿನಿಂದ ಕಾರವಾರದವರೆಗೆ ಚಿರಪರಿಚಿತರಾಗಿದ್ದವರು ನನ್ನ ತಂದೆ.

ಸಮಾಜದ ಅಭಿವೃದ್ಧಿಪರ ಚಿಂತನೆಯ ತಂದೆಯವರಿಗೆ ಕೌಟುಂಬಿಕವಾಗಿ ಆಸರೆಯಾಗಿ ನಿಂತವರು ತುಂಬು ಸಂಸಾರದ ಜವಾಬ್ದಾರಿ ಹೊತ್ತ ನನ್ನ ಮಾತೃಶ್ರೀಯವರಾದ ಗಂಗಾಬಾಯಿ.

ತಂದೆಯವರ ಸಮಾಜಮುಖಿ ಚಿಂತನೆಯ ಫಲ ಎನ್ನುವಂತೆ ಅನಕ್ಷರತೆಯನ್ನು ತೊಡೆದು ಹಾಕಲು 1969ರಲ್ಲಿ ಜನ್ಮ ತಳೆದಿದ್ದೇ ವಿದ್ಯಾರಂಗ ಮಿತ್ರ ಮಂಡಳಿ. ವಿದ್ಯಾರಂಗವು ಇಂದು ಸುವರ್ಣ ಮಹೋತ್ಸವ ಸಂಭ್ರಮದಲ್ಲಿದ್ದು ಸಮಾಜದ ವಿದ್ಯಾವಂತರು, ಚಿಂತಕರು ಇದರಲ್ಲಿ ಸಕ್ರಿಯರಾಗಿರುವುದು ಹೆಮ್ಮೆಯ ಸಂಗತಿ.

ಹಿಂದುಳಿದ ಮೀನುಗಾರ ಸಮಾಜದಲ್ಲಿ ಶಿಕ್ಷಣಕ್ಕೆ ಪೂರಕವಾಗುವಂತೆ ವಿದ್ಯಾರಂಗದಲ್ಲಿ ವಿದ್ಯಾ ನಿಧಿ ಯೋಜನೆ ಘಟಕವನ್ನು ರೂಪಿಸಿ ಕಾರ್ಯಕ್ರಮಗಳನ್ನು ಆಯೋಜಿಸಿ ಖಾರ್ವಿ ಸಮಾಜದಲ್ಲಿ ಭಾರೀ ಬದಲಾವಣೆ ತರುವಲ್ಲಿ ತಂದೆಯವರು ನಿರ್ವಹಿಸಿದ ಪಾತ್ರ ಮರೆಯುವಂಥದ್ದಲ್ಲ. ಧಾರ್ಮಿಕವಾಗಿ ಚಿಂತಿಸಿಯೂ ಮೌಢ್ಯತೆಯ ವಿರುದ್ಧ ಅವರು ದನಿ ಎತ್ತಿದರು. ಮಾರಿ ಹಬ್ಬದಲ್ಲಿ ಪ್ರಾಣಿ ಬಲಿಯನ್ನು ವಿರೋಧಿಸಿ ಯುವಜನರನ್ನು ಸಂಘಟಿಸಿ ನಿರಂತರ ಹೋರಾಟ ಮಾಡಿದರು.

ಖಾರ್ವಿ ಸಮಾಜದ ಜನಪದ ಸಂಸ್ಕೃತಿಯ ಅವಿಭಾಜ್ಯ ಭಾಗವಾದ ಹೋಳಿ ಕಾಮದಹನದ ಹಾಡುಗಳು ನಶಿಸಿ ಹೋಗುತ್ತಿದ್ದ ಸನ್ನಿವೇಶದಲ್ಲಿ ಅವುಗಳನ್ನು ಸಂಗ್ರಹಿಸಿ ಪೋಷಿಸಿದ ಶ್ರೇಯಸ್ಸು ತಂದೆಯವರಿಗೆ ಸಲ್ಲುತ್ತದೆ.

1994ರಲ್ಲಿ ವಿದ್ಯಾರಂಗ ಮಿತ್ರ ಮಂಡಳಿಯ ಬೆಳ್ಳಿ ಹಬ್ಬದ ವೇದಿಕೆಯಲ್ಲಿ ಒಂದು ದಿನದ ಕೊಂಕಣಿ ಕಾರ್ಯಕ್ರಮದಲ್ಲಿ ತಂದೆಯವರ ನಿರ್ದೇಶನದಲ್ಲಿ ಕೊಂಕಣಿ ಕೋಲಾಟ, ಜಡೆ ಕೋಲಾಟ, ಗುಮ್ಟಿ, ಗಡ್ಡೆ, ದಾಲೋರಿ, ಮರೋಳಿಯಂಥ ಖಾರ್ವಿ ಸಮಾಜದ ಜನಪದ ಕಲೆಯನ್ನು ಸಂಘಟಿಸಿ ಹೋಳಿಯ ಮಹತ್ವವನ್ನು ತಿಳಿಸುವಂಥ ಪ್ರಯತ್ನದಲ್ಲಿ ಸಫಲತೆ ಕಂಡು ತದನಂತರ ರಾಷ್ಟ್ರ ರಾಜಧಾನಿ ದೆಹಲಿಯಲ್ಲೂ ಅವುಗಳ ಪ್ರದರ್ಶನವಾದಾಗ ತಂದೆಯವರ ಮುಖದಲ್ಲಿ ಸಾರ್ಥಕ

